ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಪುಟ : ೪೮ ಜೂನ್ ೨೦೧೨ ಸಂಚಿಕೆ : ೦೬




ತುಮಕೂರು ವಿಶ್ವವಿದ್ಯಾನಿಲಯ ಆಯೋಜಿಸಿದ್ದ ಬಸವ ವನದ ಉದ್ಘಾಟನಾ ಸಮಾರಂಭದಲ್ಲಿ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಮುಖ್ಯಮಂತ್ರಿ ಶ್ರೀ ಡಿ.ವಿ. ಸದಾನಂದಗೌಡರು, ಉನ್ನತ ಶಿಕ್ಷಣ ಸಚಿವರಾಗಿದ್ದ ದಿ. ವಿ.ಎಸ್. ಆಚಾರ್ಯರವನ್ನು ಕುರಿತು ಬರೆದ "ಮರ್ಯಾದಾ ಪುರುಷೋತ್ತಮ" ಕೃತಿಯನ್ನು ಲೋಕಾರ್ಪಣೆ ಮಾಡಿದರು ಈ ಸಂದರ್ಭಲ್ಲಿ ಪೂಜ್ಯ ಶ್ರೀ ಶ್ರೀ ವೀರೇಶಾನಂದ ಸ್ವಾಮೀಜಿ, ಶಾಸಕ ಶ್ರೀ ಸೋಗಡು ಶಿವಣ್ಣ, ಶ್ರೀಮತಿ ಶಾಂತಾ ಆಚಾರ್ಯ, ಉನ್ನತ ಶಿಕ್ಷಣ ಇಲಾಖೆಯ ಪ್ರಧಾನ ಕಾರ್ಯದರ್ಶಿ ಶ್ರೀ ಸಿದ್ಧಯ್ಯ ಅವರು ಉಪಸ್ಥಿತರಿದ್ದರು



ಬೆಂಗಳೂರಿನ ಮೂಡಲಪಾಳ್ಯದಲ್ಲಿ ಶ್ರೀ ಬಸವೇಶ್ವರ ಸೇವಾ ಸಮಿತಿ ಏರ್ಪಡಿಸಿದ್ದ ಗುರುವಂದನ ಸಮಾರಂಭವನ್ನು ಪೂಜ್ಯ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ಮಾಜಿ ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪನವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಬಿ.ಎಸ್. ಪರಮಶಿವಯ್ಯ ಮೊದಲಾದ ಗಣ್ಯರು ಹಾಜರಿದ್ದರು.



ಕಾಂಗ್ರೆಸ್ ಮುಖಂಡ ಶ್ರೀ ಶ್ಯಾಮನೂರು ಶಿವಶಂಕರಪ್ಪನವರು ಶ್ರೀಮಠದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಕಾಣಿಕೆ ಸಮರ್ಪಿಸಿದ ಸಂದರ್ಭದಲ್ಲಿ ಪೂಜ್ಯ ಶ್ರೀಗಳವರು ಆಶೀರ್ವದಿಸಿದರು. ಅವರೊಂದಿಗೆ ಮಾಜಿ ಉಪ ಮೇಯರ್ ಶ್ರೀ ಪುಟ್ಟರಾಜು ಹಾಗೂ ಗಣ್ಯರು



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೪೮ ಜೂನ್ ೨೦೧೨ ಸಂಚಿಕೆ : ೩

## ಒಳಪುಟಗಳಲ್ಲಿ ..................



ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪

ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ

ಚಂದಾ ವಿವರ : ವಾರ್ಷಿಕ ಚಂದಾ ರೂ. ೧೨೦/-
ಆಜೀವ ಸದಸ್ಯತ್ವ ರೂ. ೧೦೦೦/- ಬಿಡಿ ಪ್ರತಿ ರೂ. ೧೦.೦೦

## ಪ್ರವೇಶಾವಕಾಶ

ಆತ್ಮೀಯರೇ,

ಶ್ರೀಮಠಕ್ಕೆ ವಿವಿಧ ಜಿಲ್ಲೆಗಳಿಂದ ಪ್ರವೇಶಾವಕಾಶ ಕೋರಿ ಪ್ರತಿನಿತ್ಯ ವಿದ್ಯಾರ್ಥಿಗಳು ಮತ್ತು ಅವರ ಪೋಷಕರು, ಪಾಲಕರು ಬರುತ್ತಿದ್ದಾರೆ. ಶ್ರೀಮಠದ ತುಂಬಾ ಜನಸಂದಣಿ. ವಿದ್ಯಾರ್ಥಿಗಳ ಕಲರವ, ಟ್ರಂಕು, ಚಾಪೆ, ಪುಸ್ತಕ, ಸಮವಸ್ತ್ರಗಳ ಕೊಳ್ಳುವಿಕೆ. ಬಿಡುವಿಲ್ಲದ ಕಾರ್ಯಕ್ರಮಗಳ ನಡುವೆಯೂ ಶ್ರೀಗಳು ತಾವೇ ಒಬ್ಬೊಬ್ಬ ವಿದ್ಯಾರ್ಥಿಯನ್ನೂ, ಅವರ ಪೋಷಕರನ್ನು ಸಂದರ್ಶನ ಮಾಡಿಯೇ ಪ್ರವೇಶ ನೀಡುತ್ತಿರುವ ದೃಶ್ಯ. ದೂರದ ಜಿಲ್ಲೆಗಳಾದ ಗುಲ್ಬರ್ಗ, ರಾಯಚೂರು, ಬೀದರ್, ಬಿಜಾಪುರ, ಬಳ್ಳಾರಿ, ಧಾರವಾಡ, ಬೆಳಗಾಂ ಜಿಲ್ಲೆಗಳ ವಿದ್ಯಾರ್ಥಿಗಳೇ ಹೆಚ್ಚು. ಅವರೆಲ್ಲರಿಗೂ ಪ್ರವೇಶಾವಕಾಶ ಲಭ್ಯ. ನಿರಾಶೆ ಯಾರಿಗೂ ಇಲ್ಲ.

ಮತ್ತೆ ಸಂಸ್ಥೆಯ ಸೇವಾದೀಕ್ಷೆ ಯಥಾರೀತಿ. ವಿದ್ಯಾರ್ಥಿಗಳಿಗೆ ಕೇವಲ ಅಕ್ಷರ ಜ್ಞಾನ ನೀಡಿದರೆ ಸಾಲದು. ಸಂಸ್ಕಾರ ಕೊಡಬೇಕು. ಅದಕ್ಕಾಗಿ ಸಂಜೆ ಮುಂಜಾನೆಗಳಲ್ಲಿ ಸಾಮೂಹಿಕ ಪ್ರಾರ್ಥನಾ ವಿಧಿ. ಅದೊಂದು ಅವಿಸ್ಮರಣೀಯ ದೃಶ್ಯ. ಶ್ರೀಗಳವರ ಸಾನ್ನಿಧ್ಯದಲ್ಲಿ ಸಹಸ್ರ ಸಹಸ್ರ ವಿದ್ಯಾರ್ಥಿಗಳು ಸಮವಸ್ತ್ರಧಾರಿಗಳು, ಪ್ರಾರ್ಥನಾ ಶ್ಲೋಕಗಳ, ವಚನಗಳ, ತತ್ವಗೀತೆಗಳ ಪಠಣ. ಮಧುರ ನಾದಲೋಕ. ಭಕ್ತಿಯ ಬಾಗಿಲು ತೆರೆವ ಕೀಲಿ ಕೈಗಳು. ಶ್ರೀಗಳವರಿಂದ ಆಶೀರ್ವಚನ. ಮಕ್ಕಳಿಗೂ ಅರ್ಥವಾಗುವ ತಿಳಿಯಾದ ನುಡಿಗಳು. ಪ್ರಾರ್ಥನಾ ಸಭೆಯನ್ನು ನೋಡಲೆಂದೇ ದೂರದಿಂದ ಬರುವ ಭಕ್ತಸಮೂಹ. ಬೆಳಗಿನಿಂದ ಸಂಜೆಯವರೆಗೆ ದುಡಿದ ಮನಸ್ಸಿಗೆ ಮುದ ಕೊಡುವ ಅಮೃತ ನಿಮಿಷಗಳು. ಶ್ರೀಮಠದಲ್ಲಿ ರಾಷ್ಟ್ರನಿರ್ಮಾಣ 'ಸದ್ದುಗದ್ದಲ' ವಿಲ್ಲದೆ ನಡೆದಿದೆ.

–ಸಂಪಾದಕ







## ಯೋಜನೆ

ಒಂದು ಯೋಜನೆಯನ್ನು ರೂಪಿಸಬೇಕಾಗಿದೆ. ಅದು ಧಾರ್ಮಿಕ ಸಂಬಂಧಿಯಾದುದು. ನಗರ, ಪಟ್ಟಣ, ಗ್ರಾಮಗಳೆನ್ನದೆ ಇಂದು ಎಲ್ಲರೂ ಅಲ್ಲದಿದ್ದರೂ ಬಹುತೇಕವಾಗಿ ಧರ್ಮ ಶ್ರದ್ಧೆಯಿಂದ ದೂರಸರಿಯುತ್ತಿದ್ದಾರೆ. ಆಚಾರವಿಚಾರಹೀನರಾಗುತ್ತಿದ್ದಾರೆ. ಕೇವಲ ಧನಮುಖಿಗಳಾಗಿ ಧಾವಿಸುತ್ತಿದ್ದಾರೆ. ಧರ್ಮವಿರುದ್ಧವಾಗಿ ಗಳಿಸುವ ಹಣ ಮನುಷ್ಯನನ್ನು ಮೃಗನನ್ನಾಗಿಸುತ್ತದೆ. ಹೃದಯಶೂನ್ಯನನ್ನಾಗಿಸುತ್ತದೆ. ಹಣ ಬೇಡವೆಂದಲ್ಲ. ಹಣ ಬೇಕು. ಆದರೆ ಅದು ಮಾನವೀಯತೆಯನ್ನು ಕಳೆದು ಕೊಂಡು ಬರುವಂಥದಾಗಿರಬಾರದು. ಅದಕ್ಕೆ ಶರಣರು ಹೇಳಿದ್ದು 'ಸತ್ಯಶುದ್ಧ ಕಾಯಕದಿಂದ' ಬಂದುದಾಗಿರಬೇಕು. 'ಸಕಲ ಜೀವರಿಗೆ ಲೇಸನೇ ಬಯಸುವಂತಹ' ಯೋಜನೆಗಳಿಗೆ ಹಣ ಬೇಕಾಗುತ್ತದೆ. ಅದಕ್ಕಾಗಿ ಶರಣರು ಆಚರಿಸಿ ತೋರಿಸಿದ ಜೀವನ ಮೌಲ್ಯಗಳನ್ನು ಹಳ್ಳಿಹಳ್ಳಿಗಳಲ್ಲಿ ಶ್ರಮಸಂಸ್ಕೃತಿಯ ಬಂಧು-ಭಗಿನಿಯರಿಗೆ ಕಥನ ರೂಪದಲ್ಲಿ, ಕೀರ್ತನೆಯ ರೂಪದಲ್ಲಿ ಸಂಜೆಯ ಸಮಯದಲ್ಲಿ ದೇವಾಲಯಗಳ ಆವರಣದಲ್ಲಿ, ಮಠಗಳ ಅಂಗಳದಲ್ಲಿ, ಜನ ಸೇರುವಂತಹ ಸ್ಥಳಗಳಲ್ಲಿ ಬಲ್ಲವರಿಂದ, ಅನುಭವಿಗಳಿಂದ, ವಿದ್ವಾಂಸರಿಂದ ಉಪನ್ಯಾಸಗಳ ಮೂಲಕ ಪರಿಚಯಿಸಿಕೊಡುವಂಥ ಯೋಜನೆಯನ್ನು ಪ್ರಾರಂಭಿಸಬೇಕಾಗಿದೆ. ಸೇವಾಸಕ್ತರ ಸಹಕಾರ, ಗ್ರಾಮ ಮುಖಂಡರ ನೆರವು, ಉಪನ್ಯಾಸ ಮಾಡುವವರ ಅಭಿರುಚಿ, ಅಭಿಮಾನ ಬೇಕಾಗಿದೆ. ಜನಸೇವೆಯೇ ಜಗದೀಶನ ಸೇವೆ ಎಂಬ ಮನೋಭಾವನೆ ಮುಖ್ಯ. ಎಲ್ಲೆಲ್ಲೂ ಅನೈತಿಕತೆ, ಅಧಾರ್ಮಿಕತೆ, ಅನ್ಯಯ, ಭ್ರಷ್ಟಾಚಾರಗಳೇ ವಿಜೃಂಭಿಸುತ್ತಿರುವುದು ಶುಭಲಕ್ಷಣವಲ್ಲ. ಹಾಗೆಂದು ಕೈಕಟ್ಟಿ ಕುಳಿತುಕೊಳ್ಳುವುದೂ ಸಲ್ಲ. ದೃಢವಾದ ಮನಸ್ಸುಗಳು ಮುಂದಾಗಬೇಕು. ಯಾರಿಗೇನಾದರೆ ನನಗೇನು ? ನಾನು ಸುಖವಾಗಿದ್ದರೆ ಸಾಕು ಎಂಬ ಕುಬ್ಜ ಸ್ವಾರ್ಥವನ್ನು ಬಿಟ್ಟು ಮುಂದೆ ಬರಬೇಕು. ಧರ್ಮವೆಂದರೆ ಮಾನವೀಯತೆ, ಮಾನವೀಯತೆಯನ್ನು ಮರೆತರೆ ಎಲ್ಲವನ್ನೂ ಕಳೆದುಕೊಂಡಂತೆಯೇ.

❖

ಓಂ



## ಶ್ರೀ ಸಿದ್ಧಲಿಂಗೇಶ್ವರ ವಚನ

**ಸ್ಥೂಲ ಸೂಕ್ಷ್ಮ ಪರತತ್ವವೆಂಬ ನಾಮ ನಿನಗಿಲ್ಲದಂದು**
**ನಿನ್ನ ಸ್ಥೂಲನೆಂದು ಕುರುಹಿಡುವ**
**ಅಜ ಹರಿ ಸುರಪತಿ ಮೊದಲಾದ ದೇವತೆಗಳು ಇಲ್ಲದಂದು**
**ನಿನ್ನ ಸೂಕ್ಷ್ಮನೆಂದು ಕುರುಹಿಡಿವ ಮನುಮುನೀಶ್ವರರುಗಳಿಲ್ಲದಂದು**
**ನಿನ್ನ ಸ್ಥೂಲ ಸೂಕ್ಷ್ಮ ಪರಾತ್ಪರನೆಂದು ನಾಮವನು**
**ಆದಿ ಮಧ್ಯಾವಸಾನದ ಅಖಂಡಪರಿಪೂರ್ಣತ್ವವನರಿವ**
**ಅವಿರಳಜ್ಞಾನಸಂಬಂಧಿಗಳಪ್ಪ ಗಣಾಧೀಶ್ವರರುಗಳಿಲ್ಲದಂದು**
**ಇವರಾರೂ ಇಲ್ಲದಂದು ಅನಾದಿಪರಶಿವನೆಂದೆನಲಿಲ್ಲ ಕಾಣಾ**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ**

ಸಾಕಾರನಾದ ಮಹೇಶ್ವರಮೂರ್ತಿಯು, ನಿರಾಕಾರನಾದ ಸದಾಶಿವ ಮೂರ್ತಿಯು, ಕೇವಲ ನಿರಾಕಾರವಾದ ಈಶ್ವರಮೂರ್ತಿಗಳೆಂಬ ನಾಮಗಳು ನಿನಗಿಲ್ಲದಂದು, ನಿನ್ನ ಸಾಕಾರವಾದ ಮಹೇಶ್ವರ ಮೂರ್ತಿಯೆಂದು ಹೆಸರಿಟ್ಟು ಕರೆಯುವ ಮೊದಲು, ಜಪತಪ ಆರಾಧನೆ ಕ್ರಿಯೆಗಳನ್ನು ಮಾಡಿ ಫಲ ಪದವಿಗಳನ್ನು ಪಡೆದನುಭವಿಸುವಂಥ, ಬ್ರಹ್ಮ, ನಾರಾಯಣ, ದೇವೇಂದ್ರ ಮುಖ್ಯರಾದ ಮೂವತ್ತು ಮೂರು ಕೋಟಿ ದೇವತೆಗಳು ಉಂಟಾದುವುದಕ್ಕೆ ಮೊದಲೆ, ನಿನ್ನನ್ನು ಸಾಕಾರ ನಿರಾಕಾರವಾದ ಸದಾಶಿವಮೂರ್ತಿಯೆಂದು ಕುರುಹಿಟ್ಟು ಜಪತಪಾರಾಧನೆ ಕ್ರಿಯೆಗಳನ್ನು ಮಾಡಿ-ಕೊಟ್ಟರೆ ವರ ಇಟ್ಟರೆ ಶಾಪ ಅನುಗ್ರಹದ ಸಾಮರ್ಥ್ಯವನ್ನು ಪಡೆದು ಅನುಭವಿಸುವಂಥ, ಹದಿನಾಲ್ಕು ಮನುಗಳು, ಸನಕಾದಿ ಎಂಬತ್ತೆಂಟು ಕೋಟಿಯುಮಿ ಜನಗಳು, ಉಂಟಾಗುವ ಮೊದಲೇ, ಸಾಕಾರವಾದ ಮಹೇಶ್ವರಮೂರ್ತಿಯೆಂದು, ಅಭಿದಾನವನು, ಮಹಾಲಿಂಗವನೆ ಗುರುಮುಖದಿಂದ ಇಷ್ಟಲಿಂಗವಾಗಿ ಅಂಗದಲ್ಲಿ ಸಂಬಂಧವ ಮಾಡಿಕೊಂಡು, ಆ ಇಷ್ಟಲಿಂಗಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರ ಕ್ರಿಯೆಗಳಿಂದ ಆರಾಧಿಸುವಂಥದೆ ಆ ಲಿಂಗಸ್ಥಿತಿ ಭೋಗವನು ಪಡೆದು ಅನುಭವಿಸುವಂಥದೆ, ಪರತತ್ವವಾದ ಜಂಗಮದಲ್ಲಿ ಐಕ್ಯತ್ವವಾಗಿ ಅಳವಡಿಸಿಕೊಂಡು ಆಚರಿಸುವಂಥದೆ ಅವಸಾನ, ಖಂಡಿತವಿಲ್ಲದ ಅಖಂಡತ್ವವನ್ನು ತಿಳಿವ ಅಭಿನ್ನ ಸ್ವರೂಪವಾದ, ಸಮ್ಯಕ್‌ಜ್ಞಾನದ ಸ್ವಾಯತದೊಡನೆ, ಕೂಡಿದ ಗಣಶ್ರೇಷ್ಠರುಗಳು ಉಂಟಾಗುವ ಮೊದಲೆ, ಇವರಾರೂ ಇಲ್ಲದಂದು ತ್ರಿಭುವನ ಬ್ರಹ್ಮಾಂಡಗಳಿಗೆ ಮೂಲಕಾರಣವಾದ ನಿಷ್ಕಲ ಪರಶಿವನೆಂದುಕೊಳ್ಳಲಿಲ್ಲ. ಕಂಡೆಯಾ, ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

(ಕೃಪೆ : ತೋಂಟದಾರ್ಯ ವಚನ ವ್ಯಾಖ್ಯೆ - ಸಂಪಾದಕರು ಸಾ.ಶಿ. ಮರುಳಯ್ಯ, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ(ದಾಸೋಹ ಸೇವಾಸಂಘ(ರಿ.), ಎಡೆಯೂರು.)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಬಸವಣ್ಣನ ಭಾಗ್ಯವೆ ಬಸವಣ್ಣನ ಪುಣ್ಯವೆ
ಬಸವಣ್ಣನವತಾರ ಪರಮವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶಿವಸುಂದರನಾಗಿರುವೆ ಶಿವರೂಪನಾಗಿರುವೆ
ಶಿವನಾಗಿ ಶಿವನ ಬೆಳಕಾಗಿ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಇಂದ್ರಿಯಗಳೆಲ್ಲವ ಚೆಂದದಿ ಕಾಯಕಗೊಳಿಸಿ
ಸುಂದರ ದಾಸೋಹವ ನಡೆಸಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಸೆ ಆಮಿಷವಿರದ ಕಾಮಕ್ರೋಧವಿರದ.
ಮೋಹ ಮತ್ಸರವಿರದ ಶಿವಚೆಲುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಾಯಾದೇಹಿಯಲ್ಲ ಮಾಯಾಪಾಶನಲ್ಲ
ಮಾಹೆ ಸಾವಿರಗೆದ್ದ ಘನಮಹಿಮ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗಶರೀರಿಯೆ ಲಿಂಗಾನುಭಾವಿಯೆ
ಲಿಂಗಲೀಲೆಯ ತೋರಬಂದಿರುವ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗದಂತೆ ನಡೆವೆ ಲಿಂಗದಂತೆ ನುಡಿವೆ
ಲಿಂಗವೆ ತಾನಾಗಿ ಸುಳಿದಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಕ್ತಿ ಸಾರಾಯವೆ ಮುಕ್ತಿಯ ಶ್ರೀಮುಖವೆ
ಮರ್ತ್ಯವ ಮಡಿಗೊಳಿಪ ಮಹಿಮವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಚಾರಕಾಯವೆ ಆರಾಧ್ಯ ರೂಪವೆ
ಅನುಭಾವ ಶಿವಸಿರಿಯ ದಿವ್ಯವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸರ್ವಾಂಗಲಿಂಗಿಯೆ ಸರ್ವಾಂಗ ಪರಮವೆ
ಸರ್ವಸಂಗ ನಿರ್ಲಿಪ್ತವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

**- ಹೆಚ್.ವಿ. ವೀರಭದ್ರಯ್ಯ**







## ರಾಗರಂಗ - ವಿರಾಗದೇವ

-ಶ್ರೀ ಸಿದ್ಧೇಶ್ವರ ಸ್ವಾಮಿಗಳು *

**ಈ** ಪುಷ್ಪವನ್ನು ನಾನು ನೋಡುತ್ತೇನೆ. ಪುಷ್ಪ ಮನಸ್ಸನ್ನು ತುಂಬಿಕೊಂಡರೆ ಅದು ಆ ಪುಷ್ಪದ ಚಿಂತನೆ. ಬಳಿಕ ನೋಡುವ ನಾನು, ಅದನ್ನು ನೋಡಲು ಕಾರಣವಾದ ಮನಸ್ಸು ಈ ಎರಡರ ಭಾವ ಮರೆಯಾದರೆ, ಅದು ದರ್ಶನ! ಪರಿದರ್ಶನ. ಆ ಗಳಿಗೆಯಲ್ಲಿ ನಾವು ಅನುಭವಿಸುವುದು ವಿಶೇಷಾನಂದ!!.

ಭಗವಂತನ ವಿಷಯದಲ್ಲಿಯೂ ಹೀಗೆಯೇ. ಭಗವತ್ ವಸ್ತು ಮನಸ್ಸನ್ನು ತುಂಬಿದರೆ ಅದು ಭಗವಚ್ಚಿಂತನೆ. ನಾನು ಎಂಬ ಭಾವ ಮರೆಯಾಗಿ ಹೋದರೆ ಅದೇ ಭಗವಂತನ ಅದ್ಭುತವಾದ ದರ್ಶನ! ಪ್ರತ್ಯೇಕಿಸಿ ಎದುರಿಟ್ಟು ನೋಡುವುದು ಬೇರೆ. 'ತಾನು' ಇಲ್ಲದಂತೆ ಅನುಭವಿಸುವುದು ಬೇರೆ. ಪ್ರತ್ಯೇಕಿಸಿ ನೋಡುವಾಗ ವಸ್ತು ತನಗೆ ಪ್ರತ್ಯಕ್ಷ. ತಾನು ನೋಡುವವ; ಮನಸ್ಸು ಕರಣ; ಹಾಗೂ ಆ ವಸ್ತು ದೃಶ್ಯ ವಿಷಯ. ಈ ಮೂರೂ ಭಾವನೆಗಳಿವೆ. ಆದರೆ ಪ್ರತ್ಯಕ್ಷದೊಳಗಿರುವ ಭೇದವನ್ನು ಅನ್ಯತೆಯನ್ನು ತೆಗೆದುಹಾಕಿದಾಗ ಆ ವಸ್ತುವಿನ ಸಾಕ್ಷಾತ್ಕಾರ! ಅಲ್ಲಿ ನೋಡುವವ ನಾನು; ಮನಸ್ಸು ನೋಡುವ ಸಾಧನ; ಮತ್ತು ವಸ್ತುವ ದೃಶ್ಯ ಎಂಬ ಭೇದವಿಲ್ಲ.

ಗಾಢ ನಿದ್ರೆಯನ್ನು ಪ್ರವೇಶಿಸಿದಾಗ ಆನಂದಾನುಭವ! ಆನಂದ ನಿಮಗ್ನತೆ; ಆನಂದದ ಸಾಕ್ಷಾತ್ ದರ್ಶನ. ತಾನೇ ಆನಂದ, ಆನಂದವೇ ತಾನು ಎನ್ನುವಷ್ಟು ಏಕಾತ್ಮತೆ. ಕನಸಿನೊಳಗೆ ಹಾಗಲ್ಲ. ಅಲ್ಲಿ ಭೇದವಿದೆ. ಅನೇಕ ವಸ್ತುಗಳನ್ನು ನೋಡುತ್ತೇನೆ. ಆ ನೋಡಲಾದ ವಸ್ತುವಿನಿಂದ ಬೇರಾಗಿ ನಿಂತು, ಭಗವದ್ಧ್ಯಾನದ ಪ್ರಥಮ ಹಂತದಲ್ಲಿ ಅಂದರೆ ಸಂಪ್ರಜ್ಞಾತದಲ್ಲಿ ತಾನು, ದೇವರು ಹಾಗೂ ಶುದ್ಧ ಧ್ಯಾನ ವೃತ್ತಿ ಭಿನ್ನ ಭಿನ್ನ, ಧಾತೃ ಧ್ಯಾನ ಧ್ಯೇಯ ಎಂಬ ತ್ರಿಪುಟಿ ಇದೆ. ಅಲ್ಲಿರುವ ದೇವದರ್ಶನವು 'ಪ್ರತ್ಯಕ್ಷ!' ಬಳಿಕ, ಧ್ಯಾನ ಕರಿಗೊಂಡು ಅಸಂಪ್ರಜ್ಞಾತ ಸಮಾಧಿಯಾಗುತ್ತದೆ. ಆಗ, ಧ್ಯಾತೃಭಾವ, ಧ್ಯಾನಭಾವಗಳೆರಡೂ ಧ್ಯೇಯದಲ್ಲಿ ಸಮಾಲೀನಗೊಳ್ಳುತ್ತವೆ. ಆಗ ಧ್ಯೇಯ ಮಾತ್ರವಿದೆ, ಧ್ಯೇಯವೆನಿಸದೆ! ಅದು ಧ್ಯೇಯ ಸಾಕ್ಷಾತ್ಕಾರ! ಧ್ಯಾನ. ಧ್ಯಾತೃ ಎಂಬ ವಿಕಲ್ಪ ವೃತ್ತಿಗಳಿಲ್ಲದ 'ಧ್ಯೇಯ' ಸಿದ್ಧಿ! ಅದು ನಿರ್ವಿಕಲ್ಪ ಸ್ಥಿತಿ.

ನಿರ್ವಿಕಲ್ಪ ಸ್ಥಿತಿಯನ್ನು ಒಂದು ದಿನದಲ್ಲಿ ಪಡೆಯಲಾಗದು. ಅದಕ್ಕೆ ನಿಯಮಿತ ಸಾಧನೆ ಬೇಕು. ಸವಿಕರ್ತ, ನಿರ್ವಿತರ್ಕ, ಸವಿಚಾರ, ನಿರ್ವಿಚಾರ, ಸಾನಂದ, ಸಾಸ್ಮಿತಾ ಹೀಗೆ ಹಂತ ಹಂತವಾಗಿ ಮೇಲೇರಬೇಕು.

ತೇನಸಿಂಗ್ ಒಂದು ದಿನದ ಸಾಧನೆ ಮಾಡಿದವನಲ್ಲ. ಬಾಲಕನಾಗಿದ್ದಾಗಲೇ ಆರೋಹಣ ಸಾಧನೆಗೆ ತೊಡಗಿದ. ಹಗಲು ರಾತ್ರಿ, ಕನಸು ಕನಸುಗಳಲ್ಲಿ ಅದೇ ಧ್ಯಾನ. ಅದರ ಪರಿಣಾಮವಾಗಿ ಒಂದು ದಿನ ಉನ್ನತೋನ್ನತ ಶಿವಶಿಖರವನ್ನೇರಿದ! ಮನುಕುಲದ ಇತಿಹಾಸದಲ್ಲಿ ಆ ಶಿಖರದ ಮೇಲೆ ಪಾದಾರ್ಪಣ ಮಾಡಿದ ಮೊದಲಿಗನಾತ! ಒಂದು ಭೌತಿಕ ಪರ್ವತ ಏರಲೂ ಇಷ್ಟು ಸಾಧನೆ ಅವಶ್ಯಕವೆಂದಾಗ ಪ್ರಜ್ಞಾಶಿಖರವನ್ನೇರಲು ಇನ್ನೆಷ್ಟು ಸಾಧನೆ ಮಾಡಬೇಕಾದೀತು? ಭೌತ ವಿಷಯ ರಾಗತ್ಯಾಗದಿಂದ ಪ್ರಾರಂಭವಾಗಬೇಕು. 'ಅಹಂ'ತ್ಯಾಗದಲ್ಲಿ ಪರ್ಯವಸಾನಗೊಳ್ಳಬೇಕು. ಧ್ಯೇಯಾತಿರಿಕ್ತ ಅನ್ಯವಿಚಾರ ತ್ಯಾಗದಿಂದ ಸಂಪ್ರಜ್ಞಾತ ಸಮಾಧಿ! ಧ್ಯಾತೃಭಾವ ತ್ಯಾಗದಿಂದ ಅಸಂಪ್ರಜ್ಞಾತ ಸಮಾಧಿ! ತ್ಯಾಗವೇ ಸಾಧನೆ. ತ್ಯಾಗವಿದು ವಿರಾಗ! ತ್ಯಾಗವು ಪರಮಪವಿತ್ರ ದೇವಮಾರ್ಗ.

ವಿರಾಗ; ವಸ್ತು-ವಿಷಯ ತ್ಯಾಗವು ವಿರಾಗ. ಇದು ಸುಲಭ. ಮನಸ್ಸು ಎಲ್ಲ ಭಾವನೆಗಳನ್ನು ಕಳಚಿ 'ಅಹಂ' ಅನ್ನು ಬಿಟ್ಟು ನಿರಾಭಾರಿಯಾದರದು ಪರಮವಿರಾಗ. ಇದು ಕಷ್ಟಸಾಧ್ಯ. ವೇದಾಂತ ಗ್ರಂಥ ರಚಿಸುತ್ತೇನೆ; ಎಲ್ಲವೂ ಮಾಯಿಕ. ಅರ್ಥಹೀನ ಎಂದು ತರ್ಕಬದ್ಧವಾಗಿ ಪ್ರತಿಪಾದಿಸುತ್ತೇನೆ. ಆದರೆ, ಎಲ್ಲವೂ ಭ್ರಮಾತ್ಮಕ ಎಂದು ಸಾರುವ ಗ್ರಂಥವೇ ನನ್ನ ಮನಸ್ಸನ್ನು ತುಂಬಿಕೊಳ್ಳುತ್ತದೆ; ಗ್ರಂಥದ ಅಭಿಮಾನ ಅಭಿನಿವೇಶ ನನ್ನನ್ನು ಆವರಿಸುತ್ತದೆ. ಮನಸ್ಸು ಅತಿ ಭಾರವಾಗುತ್ತದೆ. ಬಂಧನಕ್ಕೆ ಒಳಪಡುತ್ತದೆ. ಬಿಡಬೇಕಾದ ವಸ್ತು ಹಾಗೂ ವಿಚಾರಕ್ಕೇ ಮನಸ್ಸು ಅಂಟಿ

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ಕೊಳ್ಳುತ್ತದೆ. ಅದು ಅದರ ಸ್ವಭಾವ.

ಸಾಮಾನ್ಯ ವಿರಾಗವನ್ನು ರೂಢಿಸಬೇಕು ಮೊದಲು. ಬಿಡಲು ಬರುವ ವಿಷಯಗಳನ್ನು ತ್ಯಜಿಸಬೇಕು. ಬಳಿಕ ಬಿಟ್ಟ ವಸ್ತುಗಳ ನೆನಹು, ಬಿಟ್ಟೆನೆಂಬ ಭಾವ, ಬಿಡುವ ಕ್ರಿಯಾ ಕಲ್ಪನೆ ಇವನ್ನೆಲ್ಲಾ ಕಳೆದುಕೊಳ್ಳಬೇಕು. ಅದು ಪರಮ ವಿರಾಗ; ವಿಶೇಷ ವಿರಾಗ.

ಒಬ್ಬ ಯಾತ್ರಿಕ, ದೂರದ ದಾರಿ. ನಡೆದು ದಣಿದಿದ್ದ. ನೀರಡಿಕೆಯಾಗಿತ್ತು. ಒಂದು ಎತ್ತರವಾದ ತೆಂಗಿನ ಮರ ಕಂಡಿತು. ಒಳ್ಳೆಯ ಕಾಯಿಗಳು. ಮೇಲೆ ಏರಿದ. ಕೆಲಕಾಯಿ ಹರಿದು ಚೆಲ್ಲಿದ ಕೆಳಗೆ, ಬಳಿಕ ಇಳಿಯತೊಡಗಿದ. ಒಂದು ಹತ್ತು ಫೂಟ್ ಇಳಿದಿದ್ದ. ಅಲ್ಲೇ ಒಂದು ಪತಂಗ ಅವನ ಹತ್ತಿರ ಸುಳಿಯಿತು. ಬಣ್ಣಬಣ್ಣದ ಪತಂಗ, ಆಕರ್ಷಿತನಾದ. ಅದನ್ನು ಹಿಡಿವ ಆಸೆ ಮೂಡಿತು. ಒಂದು ಕೈಯಿಂದ ಗಿಡ ಹಿಡಿದು ಒಂದು ಕೈಚಚಿ ಹಿಡಿಯಲು ಯತ್ನಿಸಿದ! ಪತಂಗ ಅವನ ಕಣ್ಣ ತುಂಬಿತ್ತು; ಅವನ ಮನಸ್ಸನ್ನಾವರಿಸಿತ್ತು. ತಾನು ಎಲ್ಲಿ? ಏನು ಮಾಡುತ್ತಿದ್ದೇನೆ? ಎಲ್ಲಾ ಮರೆತ. ಹಿಡಿವ ಅತ್ಯಾತುರ. ಪತಂಗ ಅವನೆದುರೇ ಹಾಯಾಗಿ ಹಾರುತ್ತಿತ್ತು. ಆತ ಹುಚ್ಚನಾದ. ಪತಂಗದ ರಾಗ(ಮೋಹ) ತಲೆಗೇರಿತು. ಕೈದೂರ ದೂರ ಚಾಚಿದ. ಇನ್ನಷ್ಟು ಮತ್ತಷ್ಟು, ಅಷ್ಟರಲ್ಲಿ ಕೈಜಾರಿತು. ತೂಕ ತಪ್ಪಿತು. ಭೂಮಿಗೆ ಅಪ್ಪಳಿಸಿದ! ಪ್ರಾಣನೀಗಿದ! ಪತಂಗ ನಕ್ಕಿತು. ಹಾರುತ್ತಲೇ ಇತ್ತು ಇನ್ನು ಈಗಲೂ ಹಾರುತ್ತಿದೆ. ಜನ ಆಕರ್ಷಿತರಾಗುತ್ತಾರೆ. ಹಿಡಿಯ ಬಯಸುತ್ತಾರೆ. ಆ ವಿಷಯ ಪತಂಗ ಎದುರಿನಲ್ಲಿ ನಲಿಯುತ್ತದೆ. ಕೈಜಾರಿ ಬಿದ್ದು ಅಸುನೀಗುತ್ತಾರೆ!

ಅಲ್ಲೇ ನೀರು; ಅಲ್ಲೇ ಪತಂಗ, ಆದರೆ ಮುದುಕನನ್ನು ಅದು ಕೆಡುವಿರಲಿಲ್ಲ; ಆತನ ರಾಗ ಕೆಡವಿತ್ತು! ಎಲ್ಲರನ್ನೂ ಕೆಡವುತ್ತದೆ ಇನ್ನೊಮ್ಮೆ ಏಳದಂತೆ. ಮನುಷ್ಯನಿಗೆ ತೆಂಗಿನ ನೀರಿನ ತೃಪ್ತಿ ಬೇಕು ನಿಜ. ಅದು ದೊರೆಯಬೇಕಾದರೆ ಪತಂಗದ ರಾಗವಿರಬಾರದು. ಆದರೆ ಹಾಗಾಗದು, ಸುಖ ಬಯಸುವವ ಸಾಮಾನ್ಯವಾಗಿ ವಿಷಯ-ವ್ಯಾಮೋಹಕ್ಕೆ ಸಿಕ್ಕಿಹಾಕಿಕೊಳ್ಳುತ್ತಾನೆ. ಮನುಷ್ಯ ಯತ್ನದಿಂದ ದೇಹಲಿಯ ಅಧಿಕಾರ ಪೀಠದವರೆವಿಗೂ ಏರುತ್ತಾನೆ. ಆಗ ಅಲ್ಲಿ ಪತಂಗ ಹಾರುತ್ತದೆ. ಮೋಹ ಕಣ್ಣು ತುಂಬುತ್ತದೆ. ಮನುಷ್ಯ ಹುಚ್ಚನಾಗುತ್ತಾನೆ. ಈ ಜೀವನ ವೃಕ್ಷವ ಏರುತ್ತಾನೆ, ಇನ್ನೇನು ಸುಖದ ನೀರು ಕುಡಿದು ಆನಂದಪಡಬೇಕು ಎನ್ನುವ ವಯಸ್ಸಿನೊಳಗೆ ಹುಚ್ಚು ಹಿಡಿಯುತ್ತದೆ!

ನಾವು ನಿವೃತ್ತಿ ಆಗುತ್ತೇವೆ. ಎಲ್ಲರಿಗೂ ಅನಿವಾರ್ಯ ಅದು. ಆದರೆ ಮನುಷ್ಯನ ಮನಸ್ಸು ವಿಚಿತ್ರ, ರಿಟಾಯರ್ಡ್ ಎಂದರೆ ಏರಿದಲ್ಲಿಂದ ಕೆಳಗೆ ಇಳಿಯುವುದು. ಆದರೆ ಕೆಳಗೆ ಇಳಿಯುವುದರೊಳಗೆ ಅನ್ಯ ಆಸೆಯ ಪತಂಗ ಹಾರಾಡುತ್ತದೆ ಸುತ್ತಮುತ್ತ. ವಿಶ್ರಾಮದ ಕನಸು ಕನಸೇ. ಹಲವು ಹವ್ಯಾಸಗಳ ಆಕರ್ಷಣೆಗೆ ಮನಸೋತ ಮನುಷ್ಯ. ಮನಸೋಲುವ. ಆಗ ಜೀವನದ ಕೈ ಹಿಡಿತ ತಪ್ಪುತ್ತದೆ. ಕಾಲು ಜಾರುತ್ತದೆ. ಅತೃಪ್ತಿಯ ಪ್ರಪಾತಕ್ಕೆ ಬೀಳುತ್ತಾನೆ. ಇದು ನಮ್ಮೆಲ್ಲರ ಬಾಳಿನ ಕಥೆ. ಈ ಕರುಣ ಕಥೆಯನರಿತಾಗ 'ವಿರಾಗ' 'ವಿಮೋಹಾವಸ್ಥೆ' ಸಮನಿಸುತ್ತದೆ. ವಿಷಯಾಕರ್ಷಣೆಗೆ ಸೋಲದ ಸಾಮರ್ಥ್ಯ ಅಂಗವೆನಿಸುತ್ತದೆ. ಅದು ವೈರಾಗ್ಯ. ಅದು ಸಂಪತ್ತು. ಅದು 'ಅಭಯ'. ಅದಕ್ಕೆ ಸಮನಾದ ಸಿರಿಯೇ ಇಲ್ಲ. ಬಿಡುವುದೆ ವಿರಾಗ? ಅಲ್ಲ. ಹಿಡಿಯದಂತಿರುವುದು ವಿರಾಗ! ಮನೆ ಹೊಲ ಧನ ಕನಕ ಏನೆಲ್ಲ ಇರಬಹುದು. ಆದರೆ ಅವು ಹೊರಗಿರಲಿ. ಆಸ್ತಿಗಳ ಭೇದಿಸಿ ಒಳಸೇರಬಾರದು. ಏನೆಲ್ಲ ಒಳ್ಳೆಯ ಹಾಗೂ ಶ್ರೇಯಸ್ಕರ ಕಾರ್ಯ ಮಾಡಬೇಕು. ಮಾಡಿದ ಕಾರ್ಯಗಳ ಮರೆತು, ಮಾಡದಂತಿರಬೇಕು.

***ಮಾಡಿದೆನೆಂಬುದು ಮನದಲ್ಲಿ ಹೊಳೆದರೆ,***
***ಏಡಿಸಿ ಕಾಡಿತ್ತು ಶಿವನ ಡಂಗುರ !***
***ಮಾಡಿದೆನೆನ್ನದಿರಾ ಲಿಂಗಕ್ಕೆ,***
***ಮಾಡಿದೆನೆನ್ನದಿರಾ ಜಂಗಮಕ್ಕೆ***
***ಮಾಡಿದೆನೆಂಬುದು ಮನದಲ್ಲಿಲ್ಲದಿದ್ದರೆ,***
***ಬೇಡಿತ್ತನೀವ ಕೂಡಲಸಂಗಮದೇವ.***

ಮಾಡಬೇಕು. ಇಲ್ಲಿ ಹಾಸಿದ್ದಾರೆ; ನಾವೆಲ್ಲಾ ಇಲ್ಲಿ ಬಂದು ಕೂಡುತ್ತೇವೆ ಹಾಯಾಗಿ. ಆನಂದಪಡುತ್ತೇವೆ. ಹಾಸಿದವರಾರು? ನಮಗಾರಿಗೂ ತಿಳಿಯದು. ಅವರು ಕಸಗುಡಿಸಿ ಅಚ್ಚುಕಟ್ಟಾಗಿ ಹಾಸಿಗೆ ಹರವಿ, ದೀಪಹಚ್ಚಿ, ಸುಗಂಧ ಬತ್ತಿ ಉರಿಸಿ ಯಾರಿಗೂ ಗೊತ್ತಾಗದಂತೆ ಹಿಂದೆ ಕುಳಿತಿದ್ದಾರೆ. ಅವರಲ್ಲಿ ಮಾಡಿದ್ದೇವೆ ಎಂಬ ಭಾವವಿಲ್ಲ. ಅದು ನಿಜ ವಿರಾಗ! ಭಗವಂತನೂ ಹಾಗೆಯೇ. ಆತ ಆಕಾಶವನ್ನು ಹರವಿದ; ವಾಯು ಬೀಸಿದ; ನಕ್ಷತ್ರಗಳ ಹೊತ್ತಿಸಿದ; ಮಳೆಗರೆದ; ಸಾಗರಗಳ ತುಂಬಿದ; ಬೆಟ್ಟಗಳ





ಸೃಜಿಸಿದ, ವನಸಿರಿ ಬೆಳೆಸಿದ, ಆದರೆ, ಯಾರಿಗೂ ತಿಳಿಯದಂತೆ ಮೌನವಾಗಿ ಉಳಿದ! ಅವನಲ್ಲಿ ಮಾಡಿದೆ ಎಂಬ ಶಬ್ದವಿಲ್ಲ. ಮಾಡಿದುದಕ್ಕೆ ಪ್ರತಿಯಾಗಿ ನಿರೀಕ್ಷೆ ಇಲ್ಲ. ಒಂದು ಬಟ್ಟಲ ನೀರಿತ್ತವರು ಒಂದು ತುತ್ತ ಅನ್ನವಿಕ್ಕಿದವರು ಸಾರಿಕೊಳ್ಳುತ್ತಾರೆ. ಯಾರದು ಅನ್ನ? ಯಾರದು ನೀರು? ಆತ ಮರೆಯಲ್ಲಿ! ಆತ ತುಂಬಿದ ವಸ್ತು; ತುಳುಕದು. ಮಾಡಿ ಮಾಡಿಲ್ಲ. ಕೊಟ್ಟು ಕೊಟ್ಟಿಲ್ಲ. ಸದಾ ಸರ್ವದಾ ನಿಶ್ಶಬ್ಧ! ಅದು 'ವಿರಾಗ' ತತ್ವ.

ಮಾನವನಲ್ಲಿ ರಾಗ ಹೆಚ್ಚು! ವಸ್ತುಗಳೆಂದರೆ ಬಾಯಿ ಬಿಡುತ್ತಾನೆ. ತನ್ನದಲ್ಲದ, ತನ್ನದೆನಿಸದ ಸಂಪದದ ಮೇಲೆ ಕಣ್ಣು ಅವನದು. ಅಶಿಕ್ಷಿತರೂ ಸರಿ; ಸುಶಿಕ್ಷಿತರೂ ಸರಿ. ವರದಕ್ಷಿಣ, ವಧುದಕ್ಷಿಣ, ಕಪ್ಪ ಕಾಣಿಕೆ ಎಂದರೆ ಆತ ಹುಚ್ಚನಾಗುತ್ತಾನೆ. ತನ್ನದಲ್ಲದುದಕ್ಕೆಯೇ ಇಷ್ಟು ಲಾಲಸೆ ಪಡುವ ಈತ ತಾನು ಗಳಿಸಿದುದಿದ್ದರೆ ಅದೆಂತು ಕೈಬಿಟ್ಟಾನು? ರಾಗವೇ ಮೈವೆತ್ತವ! ಈ ರಾಗವಿಲ್ಲದಿದ್ದರದೇ 'ವಿರಾಗ'; ಅದೇ 'ದೇವರು'. ನಿರಾಭಾರಿತ್ವ ಅದನ್ನು ಚಿಂತಿಸಬೇಕು. ವಿರಾಗದ ಭಾವ ಅಳವಡಬೇಕು.

***ಯತೋ ವಾ ಇಮಾನಿ ಭೂತಾನಿ ಜಾಯಂತೇ***
***ಯೇನ ಜಾತಾನಿ ಜೀವಂತಿ ।***
***ಯತ್ ಪ್ರಯಂತ್ಯಭಿಸಂವಿಶಂತಿ***
***ತದ್‌ವಿಜಿಜ್ಞಾಸಸ್ವ । ತದ್‌ಬ್ರಹ್ಮೇತಿ ॥***

ಇದು ಋಷಿ ದರ್ಶನ. ಲೋಕದಲ್ಲಿರುವುದೆಲ್ಲಾ ಅವನಿಂದ ಬಂದಿದೆ. ಅವನನ್ನಾಶ್ರಯಿಸಿ ನಿಂತಿದೆ. ಕೊನೆಗೆ ಅವನಲ್ಲಿ ಪ್ರವೇಶಿಸುತ್ತದೆ. ಆತ ಆದಿಮೂಲ; ಅಂತ್ಯಮೂಲ. ಮಧ್ಯಾಧಾರ. ಆದರೇನು? ಅವನು ಇಲ್ಲವೇ ಇಲ್ಲ ಎನ್ನಿಸುತ್ತದೆ! ಅಷ್ಟು ನೀರವ ಅಂಥ ವಿರಾಗ ಸ್ಥಿತಿ! ಅದನ್ನು ಚಿಂತಿಸಬೇಕು. ಈ ವಿಶ್ವ ನೋಡಿ. ಆ ವಿರಾಗತತ್ತ್ವ ಪರಿಭಾವಿಸಬೇಕು.

ಎಲ್ಲಿ ಪರಮವಿರಾಗ ಅದೂ ದೇವರು! ಎಲ್ಲೆಲ್ಲಿ ವಿರಾಗ ದರ್ಶನ ಉಂಟಾಗುತ್ತದೆ ಅದು ದೇವರೇ. ತಾಯಿಯೊಳಗೆ ವಿರಾಗವಿದ್ದರೆ ತಾಯಿ ದೇವರು. ತಂದೆಯೊಳಗಿದ್ದರೆ ತಂದೆ ದೇವರು. ಅತಿಥಿ, ಆಚಾರ್ಯರಲ್ಲಿದ್ದರೆ ಅವರು ದೇವರು. ನಿಮ್ಮೊಳಗಿದ್ದರೆ ನೀವೇ ದೇವರು. ಈ ರೀತಿ ವಿರಾಗ ದರ್ಶನವಾದರೆ ಮನಸ್ಸು ಸ್ವಸ್ಥಗೊಳ್ಳುತ್ತದೆ. ಸಮಾಧಾನ ಉಂಟಾಗುತ್ತದೆ. ಇದು ಭಗವತ್ ಚಿಂತನದ ಫಲ! ಮಾಡಿ ಮರೆಯೋದು ಇದು ವಿರಾಗ. ಮಾಡಿ ನೆನೆಸೋದು ಇದು ವ್ಯವಹಾರ. ಮಾಡದೇ ಮಾಡಿದ್ದೇನೆ ಎಂದು ಹೇಳಿಕೊಳ್ಳೋದು ಅಪರಾಧ.

ಮಾಡಿಯೂ ಮೌನವಾಗಿರುವುದು ದೇವರು. ಮಾಡಿ ಮಾತನಾಡುವವನು ಡಾಂಭಿಕ. ಗಾಂಧಿ ಮಾಡಿದ; ಸ್ವಾತಂತ್ರ್ಯ ತಂದುಕೊಟ್ಟ ಏನು ಶಕ್ತಿ! ಗಾಂಧಿ ಮಾತನಾಡಿದರೆ ನಲವತ್ತು ಕೋಟಿ ಜನ ಮೈಕಿವಿಯಾಗಿ ಕೇಳುತ್ತಿತ್ತು. ಸ್ವಾತಂತ್ರ್ಯ ಸಿಕ್ಕಿತು. ಬ್ರಿಟಿಷರು ಹೋದರು. ಬರಿದಾದ ರಾಜ ಗದ್ದಿಗೆಯತ್ತ ಯಾರು ಯಾರೋ ಧಾವಿಸಿದರು! ದುಡಿದ ಗಾಂಧಿ ಎಲ್ಲಿಯೋ ಒಬ್ಬಂಟಿಗನಾಗಿ ಪ್ರಾರ್ಥಿಸುತ್ತಿದ್ದ ದೇಶಹಿತಕ್ಕಾಗಿ! ಉಸಿರೂ ಬಿಟ್ಟ ರಾಮ ರಾಮ ಎನ್ನುತ್ತ. ನಾವು ಭಾರೀ ಭಾಷಣ ಮಾಡುವಲ್ಲಿ ಮಗ್ನರು. 'ನಾವು ಜೀವ ತೇಯ್ದು, ಪ್ರಾಣ ಪಣಕಿತ್ತು, ಹೋರಾಡಿ ಸ್ವಾತಂತ್ರ್ಯ ತಂದೆವು. ಅದರ ಪ್ರತಿಫಲ ನಮ್ಮದು!' ಎಂದು ಸಾರಿದೆವು! ಬಹುತರ ಹೋರಾಟ ನಡೆದ ದಶಕಗಳಲ್ಲಿ ನಮ್ಮಲ್ಲಿ ಕೆಲವರು ಹುಟ್ಟಿರಲೂ ಇಲ್ಲ! ಆದರೂ ಭಾಷಣ! ಇದು ರಾಗದ ರಂಗ! ವಿರಾಗದ ಅವಹೇಳನ.

ಇನ್ನೊಂದು ದೃಷ್ಟಾಂತ. ಬಸವಣ್ಣ. ಲಕ್ಷಾಂತರ ಶರಣರ ಕಣ್ಮಣಿ, ಅವರ ಪ್ರಾಣಚೇತನ. ಪಂಚ ಪರುಷ ಪುರುಷ. ಕ್ರಿಯಾಸಿದ್ಧಿ. ಆತ ಭವ್ಯ ಅನುಭಾವ ಸಿಂಹಾಸನ ರೂಪಿಸಿದ. ತಾನು ಅಲಂಕರಿಸಲಿಲ್ಲ. ಅಲ್ಲಮನಿಗಾಗಿ ವರುಷ ವರುಷ ಕಾದಿರಿಸಿದ. ಪ್ರಭು ಬಂದ. ನೋಡಿದ; ಏರಿದ. ಕೆಲವು ದಿನಗಳ ನಂತರ ಇಳಿದ! ಅದು ತನ್ನ ಸಿಂಹಾಸನ ಎಂದು ಹೇಳಿಕೊಳ್ಳಲಿಲ್ಲ. ಮುಂದೆ ಆ ಸಿಂಹಾಸನದ ಮೇಲೆ ಯಾರು ಕೂಡಬೇಕು ಎಂದು ನಿರ್ದೇಶನ ಮಾಡಲಿಲ್ಲ. ಹೊರಟುಹೋದ ನಿರಾಭಾರಿಯಾಗಿ! ಹತ್ತೆರಡು ವರುಷ ದೇಶದಲ್ಲಿ ಸಂಚರಿಸಿದ, ಆ ಸಿಂಹಾಸನದ ನೆನಪೇ ಇಲ್ಲದೇ! ಅಗಾಧ ವಿರಾಗ! ಅಂದು ತಾನು ಮನೆಬಿಟ್ಟು ಹೊರಬಂದ ನಮಗೆ ಹತ್ತು ಸಲ ಮನೆಯ ನೆನಪು ಇದು ರಾಗಸ್ಥಿತಿ ಅಲ್ಲಮನದು. ಸಹಜ ವಿರಾಗ ಸ್ಥಿತಿ. ಇದು ರಾಗಸ್ಥಿತಿ. ಅಲ್ಲಮನದು ಸಹಜ ವಿರಾಗಸ್ಥಿತಿ, ಆದ್ದರಿಂದಾತ ಹಿರಿಯ. ವಿರಾಗ ರೂಪವೇ ಆದ ಅತ ಗುರು! ಆತ ದೇವರು; ಸುಳಿಗಾಳಿಯಂತೆ ಸುಳಿದ.

ನಿರಾಭಾರಿಯಾಗಿ ಜ್ಞಾನಿಗಳು ಕೇವಲ ಹಿಂದೆಯೇ

ಇದ್ದರೆಂದಲ್ಲ. ಈಗಲೂ ಇದ್ದಾರೆ. ಜಗತ್ತಿನ ಎಲ್ಲ ದೇಶಗಳಲ್ಲೂ ಇದ್ದಾರೆ. ಅವರ ನಿರಾಭಾರಿ ಬದುಕನ್ನು ನೆನಸಿಕೊಳ್ಳುವುದು ಚಿಂತನ. ಅಂಗವಿಸಿಕೊಳ್ಳುವುದು ಅಭಿಚಿಂತನ. ನಮ್ಮ ಸುತ್ತಮುತ್ತಲು ಇಂತಹ ಅನೇಕ ಜನರು ಇರುತ್ತಾರೆ. ನಿಮ್ಮ ನಿಮ್ಮ ಸತಿಯಂದಿರನ್ನು ನಿಮ್ಮ ಮನೆಯಲ್ಲಿ ಗಮನಿಸಿರಿ. ನಿಮ್ಮ ಸತಿಯಂದಿರು ನಿಮಗಾಗಿ ನಿಮ್ಮ ಮಕ್ಕಳಿ ಗಾಗಿ ಹಗಲೂ ರಾತ್ರಿ ದುಡಿಯುತ್ತಾರೆ. ತಮ್ಮ ಆಸರಿಕೆ ಬೇಸರಿಕೆ ಉಪೇಕ್ಷಿಸುತ್ತಾರೆ. ನಿದ್ದೆ ನೀರಡಿಕೆ ಕಟ್ಟಿ ನಿಮ್ಮ ಸೇವಿಸುತ್ತಾರೆ. ನಿಮ್ಮಂತೆ ವಾರಕ್ಕೊಂದೋ ಎರಡೋ, ವರ್ಷಕ್ಕೆ ನೂರೋ, ಇನ್ನೂರೋ ದಿನ 'ಬಿಡುವಿಲ್ಲ' ಅವರಿಗೆ, ನಿಮ್ಮ ಹಿತವೇ ತಮ್ಮ ಹಿತವೆಂದು ಭಾವಿಸಿ ಬದುಕುತ್ತಾರೆ. ಅವರದೂ ವಿರಕ್ತಿಯೇ. ಅವರಲ್ಲಿ ದೇವತ್ವ ಕಾಣುವುದು 'ಚಿಂತನ!'.

ಜಗತ್ತಿನಲ್ಲಿ ವಿರಾಗಶೀಲ ವ್ಯಕ್ತಿಗಳು ಅನೇಕರು; ಎಲ್ಲೆಡೆ. ತೆರೆದ ಕಣ್ಣಿನಿಂದ ಕಂಡರೆ ಎಲ್ಲೆಡೆಯೂ ಭಗವಂತನ ವಿರಾಗ ರೂಪ ಗೋಚರಿಸದಿರದು. ಕಸದ ಮೇಲೆ ಬೆಳೆದ ಬಳ್ಳಿಯಲ್ಲಿ. ಪಣತೆಯಲ್ಲಿ ಹೊತ್ತಿದ ಜ್ಯೋತಿಯಲ್ಲಿ. ಸಿಹಿ ಹಣ್ಣುಗಳಿಂದ ತುಂಬಿ ಹೋದ ವೃಕ್ಷದಲ್ಲಿ ವಿರಾಗ ರೂಹಿದೆ! ಹಾಗೆ ಅದನ್ನು ಗುರುತಿಸಬೇಕು ಅಷ್ಟೇ.

❖

## ಆತ್ಮವಿಶ್ವಾಸ

ವ್ಯಕ್ತಿಗೆ ಆತ್ಮವಿಶ್ವಾಸ ತಂದೆ-ತಾಯಿ, ಬಂಧು-ಬಳಗವಿದ್ದಂತೆ, ಗಟ್ಟಿಯಾದ ಮನಸ್ಸು ನಿರ್ದಿಷ್ಟ ಗುರಿಯನ್ನು ಮುಟ್ಟಿಸುತ್ತದೆ. ದಡ ಸೇರಿಸುತ್ತದೆ.

ಕನ್ನಡ ಸಾಹಿತ್ಯದಲ್ಲಿ ರನ್ನನ ಹೆಸರು ಚಿರಸ್ಮರಣೀಯವಾದುದು. ಹುಟ್ಟಿದ್ದು ಮುದುವೊಳಲಿನಲ್ಲಿ ಬಳೆಗಾರ ಮನೆತನ, ಕಲಿಯಲು ಯಾರಿಂದಲೂ ಪ್ರೋತ್ಸಾಹವಿರಲಿಲ್ಲ. ರನ್ನನ ಆಸೆಗೆ ಎಲ್ಲರೂ ತಣ್ಣೀರು ಎರಚಿದರು. ಕಲಿಯಲೇಬೇಕೆಂಬ ಆತ್ಮವಿಶ್ವಾಸ ಹೊತ್ತು ಬಂಕಾಪುರಕ್ಕೆ ಬಂದರು. ಇದನ್ನು ಪಂಡಿತಪುರಿ ಎಂದು ಕರೆಯುತ್ತಿದ್ದರು. ರನ್ನಾನ ಬಯಕೆಯನ್ನು ತಿಳಿದು, ಸಾಹಿತ್ಯಾಭ್ಯಾಸ ಮತ್ತು ಕಾವ್ಯರಚನೆಯ ಉದ್ದೇಶಕ್ಕಾಗಿ ಕಲಿಯಲು ಬಂದ ರನ್ನನಿಗೆ ಎಲ್ಲಾ ಅನುಕೂಲಗಳನ್ನು ಗುರುಗಳು ಮಾಡಿಕೊಟ್ಟರು. ರನ್ನ ಕಾವ್ಯಶಾಸ್ತ್ರಗಳನ್ನು ಶ್ರದ್ಧೆಯಿಂದ ಅಭ್ಯಾಸ ಮಾಡಿದ ರತ್ನತ್ರಯರಲ್ಲಿ ಒಬ್ಬರು, ಗದಾಯುದ್ಧ ಮತ್ತು ಅಜಿತ ಪುರಾಣ ಕೃತಿಗಳನ್ನು ರಚಿಸಿದರು. ಕುವೆಂಪುರವರು 'ರನ್ನ ವರಕವಿ, ಚಿರಕವಿ ಮತ್ತು ಮಹಾಕವಿಯಾಗಿ ನಿಂತಿದ್ದಾನೆ' ಎಂದಿರುವ ಮಾತು ಅರ್ಥಪೂರ್ಣವಾದುದು.

ನಮ್ಮ ವಿದ್ಯಾರ್ಥಿಗಳು ಕಲಿಯಲು ಪಟ್ಟಣಗಳಿಗೆ ಬರುತ್ತಾರೆ. ಇಲ್ಲಿ ಎಲ್ಲಾ ಅನುಕೂಲಗಳು ಇರುತ್ತವೆ. ಬಡ ವಿದ್ಯಾರ್ಥಿಗಳಿಗೆ ಕೆಲವು ತೊಂದರೆಗಳಿರುತ್ತವೆ. ಆದರೆ ಆತ್ಮವಿಶ್ವಾಸವಿದ್ದರೆ ಬೇಕಾದ ವಿದ್ಯೆಯನ್ನು ಕಲಿಯಬಹುದು. ಪಟ್ಟಣದ ಆಕರ್ಷಣೆಗೆ ಒಳಗಾಗಿ ಕೆಲವು ವಿದ್ಯಾರ್ಥಿಗಳು ಓದುವುದನ್ನು ಬಿಟ್ಟು ದುಶ್ಚಟಗಳಿಗೆ ದಾಸರಾಗಿ ತಂದೆ, ತಾಯಿಯರಿಗೆ ಮನೆತನಕ್ಕೆ ಅಗೌರವ ತರುತ್ತಾರೆ. ವಿದ್ಯಾರ್ಥಿ ಜೀವನ ಒಂದು ತಪಸ್ಸು, ಹಗಲಿರುಳು ಕಷ್ಟಪಟ್ಟು ಓದಬೇಕು ಗ್ರಂಥಾಲಯ ಸಹಾಯ, ಗುರುಗಳ ಮಾರ್ಗದರ್ಶನ ಪಡೆಯಬೇಕು. ಹಿಂದೆ ಗುರು, ಮುಂದೆ ಗುರಿಯನ್ನು ಇಟ್ಟುಕೊಂಡು ಆತ್ಮಸಾಕ್ಷಿಯಾಗಿ ಅಭ್ಯಾಸ ಮಾಡಿ, ಕಲಿಕೆಯಲ್ಲಿ ಮುನ್ನಡೆ ಸಾಧಿಸಬೇಕು. ಒಳ್ಳೆಯ ಗೆಳೆಯರ ಸಹವಾದ ಬಹಳ ಅವಶ್ಯಕ. ಕರ್ತವ್ಯಪ್ರಜ್ಞೆ ಇಲ್ಲದಿದ್ದರೆ ವಿದ್ಯಾರ್ಥಿಗಳ ಜೀವನ ಅಧಃಪತನವಾಗುತ್ತದೆ. ತಮ್ಮ ಭವಿಷ್ಯದ ಬಗ್ಗೆ ಚಿಂತಿಸಬೇಕು.

ವ್ಯಾಪಾರಿಗಳಿಗೆ, ಶಿಕ್ಷಕರಿಗೆ ಸಮಾಜಸೇವಕರಿಗೆ ಆತ್ಮವಿಶ್ವಾಸ ಬಹಳ ಮುಖ್ಯ. ಉದ್ಯಮಗಳನ್ನು ನಡೆಸುವವರಿಗೆ ಆತ್ಮವಿಶ್ವಾಸವಿಲ್ಲದಿದ್ದರೆ, ಪ್ರಗತಿ ಸಾಧಿಸಲಾಗುವುದಿಲ್ಲ. ಶ್ರದ್ಧೆ, ಧೈರ್ಯ, ಸಾಹಸ, ಕಷ್ಟಸಹಿಷ್ಣುತೆ, ಸಹಕಾರ ಪಡೆಯುವುದು, ಸಹಕಾರ ನೀಡುವುದರಿಂದ ಹಿಡಿದ ಕೆಲಸದಲ್ಲಿ ಜಯಗಳಿಸಬಹುದು. ಪ್ರಾರಂಭದಲ್ಲಿ ಪ್ರತಿಯೊಂದು ಕೆಲಸದಲ್ಲೂ ಹಿನ್ನಡೆ ಸ್ವಾಭಾವಿಕ. ದಿನ ಕಳೆದಂತೆ ಮಾಡಿದ ತಪ್ಪನ್ನು ಸರಿಪಡಿಸಿಕೊಂಡು, ಸಿದ್ಧತೆ ಹಾಗೂ ಆತ್ಮವಿಶ್ವಾಸದಿಂದ ಹಿಡಿದ ಕೆಲಸದಲ್ಲಿ ಪ್ರಗತಿ ಸಾಧಿಸಬಹುದು. ಆಸೆಯೇ ಜೀವನ, ನಿರಾಶೆಯೇ ಮರಣ, ತೃಪ್ತಿಯೇ ಜೀವನ, ಅತೃಪ್ತಿಯೇ ಮರಣ, ಆತ್ಮವಿಶ್ವಾಸವಿಲ್ಲದ ಬದುಕು ಶೂನ್ಯ.

-ಕೆ.ಎನ್. ಸ್ವಾಮಿ, ಕ್ಯಾತ್ಸಂದ್ರ





# ವೇದ ವಿಚಾರ

-ಬೆಳ್ಳಾವಿ ಸೋಮಶೇಖರಯ್ಯ ಗುರುಪ್ರಕಾಶ್ *

ಭಾರತೀಯರ ಪ್ರಕಾರ ಬ್ರಹ್ಮನಿಗೆ ಪರಮೇಶ್ವರನು ಅನುಗ್ರಹಿಸಿದ ಜ್ಞಾನವನ್ನು 'ವೇದ'ಗಳೆಂಬ ಹೆಸರಿನಿಂದ ಸಂಗ್ರಹಿಸಲಾಗಿದೆ. ವೇದಗಳು ಅವನನ್ನೇ 'ಪರಬ್ರಹ್ಮ'ನೆಂದೂ, ಈಶ್ವರನೆಂದೂ, ಪರಮೇಶ್ವರನೆಂದೂ ಕೊಂಡಾಡಿವೆ.

ವೇದ: ವೇದವೆಂದರೆ ಜ್ಞಾನ, ಇವುಗಳಿಗೆ ಶ್ರುತಿ, ಆಗಮ, ನಿಗಮ ಎಂಬ ಹೆಸರುಗಳೂ ಇವೆ. ವೇದಗಳೇ ಭಾರತದ ಮೂಲಗ್ರಂಥಗಳು. ಇವು ಪರಮಾತ್ಮನ ಅನುಗ್ರಹದಿಂದ ಗೋಚರವಾದವುಗಳು. ವೇದ 'ಸತ್ಯದ ಮರುಸ್ಥಾಪನೆ' ಹಾಗೂ ಇಂದಿನ ಪರಿಸ್ಥಿತಿಯಲ್ಲಿ ಅನಿವಾರ್ಯ. ಇದು ಸಾಧ್ಯವಾದರೆ ಜಗತ್ತಿಗೆ ನೆಮ್ಮದಿ, ಆ ಪ್ರಯತ್ನವನ್ನು ಯಾವುದೇ ರೂಪದಲ್ಲಿ ಮಾಡುವವರೇ ಋಷಿ. ಅನಾದಿಯಿಂದಲೂ ಅವರು ಇದನ್ನೇ ಮಾಡುತ್ತಿದ್ದರು. 'ಯಾವಾಗ ಋಷಿ ಜೀವನದ ಮಹತ್ವ ಸಾಧನೆ ಕೊರತೆ ಇಂದ ಕಡಿಮೆಯಾಯಿತೋ ಆಗ ವಾದ ಮತ್ತು ಹೋರಾಟ, ಕ್ರೌರ್ಯದ ನೆಲೆ ಜಾಸ್ತಿಯಾಯಿತು' ಪ್ರತಿಬಾರಿಯೂ ಅಂತಹ ಸಂದರ್ಭದಲ್ಲಿ ಜಗತ್ತು ಬದಲಾವಣೆಗಾಗಿ ತುಡಿಯುತ್ತಿರುತ್ತದೆ. ಸದ್ಯದ ಪರಿಸ್ಥಿತಿಯಲ್ಲಿ ಆ ತುಡಿತ ಎಲ್ಲೆಲ್ಲೂ ಕಾಣುತ್ತಿದೆ.

ಜಗತ್ತೇ ವಾಸುದೇವನ ಒಂದು ಕುಟುಂಬ, ಜಾಗತೀಕರಣದ ಪ್ರಭಾವಕ್ಕೊಳಗಾದ ಈ ಜಗತ್ತು ಕೂಡ ವ್ಯಾಪಾರಿ ದೃಷ್ಟಿಯಿಂದ ಜಗತ್ತೇ ಒಂದು ಹಳ್ಳಿ ಎನ್ನುತ್ತದೆ. 'ಅದರೆ ಇಲ್ಲಿ ಸ್ವಾರ್ಥವಿದೆ', ಈ ಕಾರಣಕ್ಕಾಗಿ ಅಲ್ಲಿ ನೆಮ್ಮದಿಯ ಹುಡುಕಾಟವಿರುತ್ತದೆ. ಸರ್ವೇ ಜನಾಃ ಸುಖಿನೋ ಭವಂತು ಎಂಬ ಋಷಿಯಲ್ಲಿ ವ್ಯಾಪಾರದ ಉದ್ದೇಶವಿರಲಿಲ್ಲ. ಒಂದೇ ಕುಟುಂಬವೆಂಬ ಭಾವ ಬರುವುದು ಇಂತಹ ನಿಸ್ವಾರ್ಥ ಬ್ರಹ್ಮಾವಸ್ಥೆಯಲ್ಲಿ ಮಾತ್ರ. 'ಸತ್ವದಲ್ಲಿ' ವ್ಯತ್ಯಾಸ ಉಂಟಾಗಲು ಸಾಧ್ಯವಿಲ್ಲ. ಆದ್ದರಿಂದ ಋಷಿಗಳು ಭಗವಂತನನ್ನು ಸತ್-ಚಿತ್-ಆನಂದ ಎಂದು ಕರೆದರು. ಸತ್ಯವಾದ ಶಾಶ್ವತವಾದ ಆನಂದವೇ ಪರಬ್ರಹ್ಮ ಅಥವಾ ಭಗವಂತ.

ವೇದಗಳು ನಾಲ್ಕು ೧) ಋಗ್ವೇದ ೨) ಯಜುರ್ವೇದ ೩) ಸಾಮವೇದ ೪) ಅಥರ್ವಣವೇದ

೧) ಋಗ್ವೇದ : ಈ ವೇದವು ಪ್ರಧಾನವಾಗಿ ಪ್ರಾರ್ಥನಾ ಮಂತ್ರಗಳ ಸಂಕಲನ.

೨) ಯಜುರ್ವೇದ : ಇದು ಯಜ್ಞಯಾಗಾದಿಗಳನ್ನು ವಿಶದಪಡಿಸುತ್ತದೆ.

೩) ಸಾಮವೇದ : ಇದರಲ್ಲಿ ಋಗ್ವೇದದ ಹಲವು ಮಂತ್ರಗಳನ್ನು ಆರಿಸಿ ಸಪ್ತಸ್ವರದ ಚೌಕಟ್ಟಿಗೇರಿಸಿ, ಯಾವ ಸಂದರ್ಭಗಳಲ್ಲಿ ಹಾಡಬೇಕೆಂದು ವಿವರಿಸುತ್ತದೆ.

೪) ಅಥರ್ವಣವೇದ : ಇದು ಪ್ರಾಯಶಃ ನೈತಿಕ ನಿಯಮಗಳ ಮತ್ತು ಲೌಕಿಕ ವಿಜ್ಞಾನ ಕೈಪಿಡಿಯಾಗಿದೆ.

ಪ್ರತಿಯೊಂದು ವೇದವನ್ನು :

೧. ಮಂತ್ರಗಳು ಅಥವಾ ಸಂಹಿತೆಗಳು
೨. ಬ್ರಾಹ್ಮಣಕಗಳು
೩. ಅರಣ್ಯಕಗಳು
೪. ಉಪನಿಷತ್ತುಗಳು

ಎಂದು ನಾಲ್ಕು ವಿಧಗಳಾಗಿ ವಿಂಗಡಿಸಲಾಗಿದೆ.

೧. ಮಂತ್ರಗಳು/ಸಂಹಿತೆಗಳು : ಇದು ಪ್ರಾರ್ಥನಾ ಮಂತ್ರಗಳ ಸಂಕಲವಾಗಿದೆ.

೨. ಬ್ರಾಹ್ಮಣಕಗಳು : ಇದರಲ್ಲಿ ಯಜ್ಞ ಯಾಗಾದಿಗಳನ್ನು ಮಾಡುವ ಕ್ರಮವನ್ನು ವಿವರಿಸಿದೆ.

೩. ಅರಣ್ಯಕಗಳು : ಯಜ್ಞ ಯಾಗಾದಿಗಳನ್ನೇ ಆಧಾರವಾಗಿ ಹೊಂದಿರುವ ಉಪಾಸನೆಗಳನ್ನು ಇದರಲ್ಲಿ ವಿವರಿಸಿದೆ.

೪. ಉಪನಿಷತ್ತು : ಇದು ಜಗತ್ತಿನ ಹಿಂದಿರುವ ಮೂಲಸತ್ಯ ಮಾನವನ ನಿಜಸ್ವರೂಪ ಜೀವನದ ಗುರಿ. ಅದನ್ನು ತಲುಪುವ ಮಾರ್ಗವನ್ನು ವಿವರಿಸಿದೆ.

* ನಿವೃತ್ತ ತಾಂತ್ರಿಕಾಧಿಕಾರಿ, ಎಲ್‌ಆರ್‌ಡಿಇ/ಡಿಆರ್‌ಡಿಒ, ಬೆಂಗಳೂರು-೫೬೦ ೦೯೩.

# ವಿದ್ಯೆ-ಅವಿದ್ಯೆ

-ಡಾ|| ಸಿ.ಪಿ. ಕೃಷ್ಣಕುಮಾರ್*

'ವಡ್ಡಾರಾಧನೆ' ಎಂಬ ಪ್ರಾಚೀನ ಗ್ರಂಥವೊಂದರಲ್ಲಿ ಅಗ್ನಿಭೂತಿ, ವಾಯುಭೂತಿ ಎಂಬ ಸೋದರರಿಬ್ಬರ ಕತೆ ಬರುತ್ತದೆ. ಇಬ್ಬರನ್ನೂ ಅವರ ತಾಯಿ ಸೂರ್ಯಮಿತ್ರನೆಂಬ ತನ್ನ ಅಣ್ಣನಲ್ಲಿಗೆ ವಿದ್ಯಾಭ್ಯಾಸಕ್ಕಾಗಿ ಕಳುಹಿಸುತ್ತಾಳೆ. ತಾನು ಅವರ ಸೋದರಮಾವನೆಂದು ತಿಳಿಸಿದರೆ ಅವರು ಸರಿಯಾಗಿ ವಿದ್ಯೆ ಕಲಿಯುವುದಿಲ್ಲವೆಂದು ಬಗೆದ ಸೂರ್ಯಮಿತ್ರ, 'ನಾನು ನಿಮ್ಮ ಸೋದರಮಾವನಲ್ಲ, ಆದರೇನು? ನೀವು ವಿದ್ಯಾರ್ಥಿಗಳಾಗಿ ಬಂದಿದ್ದೀರಿ, ನಿಮಗೆ ಕಲಿಸುತ್ತೇನೆ' ಎಂದು ಹೇಳಿ, ಯಾವ ಸುಖಭೋಗಗಳಿಗೂ ಅವಕಾಶಕೊಡದೆ, ತುಂಬಾ ಕಠಿಣವಾದ ರೀತಿಯಲ್ಲಿ ಅವರಿಗೆ ವಿದ್ಯಾಭ್ಯಾಸ ಮಾಡಿಸುತ್ತಾನೆ. ಏಳೆಂಟು ವರ್ಷಗಳಲ್ಲಿ ಅವರು ಸಕಲವಿದ್ಯಾಪರಿಣಿತರಾಗುತ್ತಾರೆ. ವಿದ್ಯೆ ಕಲಿಯುವುದು ಹೇಗೆ, ಹಿಂದಿನ ಕಾಲದಲ್ಲಿ ಹೇಗೆ ಕಲಿಯುತ್ತಿದ್ದರು ಎಂಬುದರ ಮೇಲೆ ಇದು ಬೆಳಕು ಬೀರುತ್ತದೆ. ಮುಂದಿನ ಸ್ವಾರಸ್ಯವನ್ನು ನೋಡೋಣ. ಅಗ್ನಿಭೂತಿ, ವಾಯುಭೂತಿಯರ ಕಲಿಕೆ ಪೂರ್ಣವಾದ ನಂತರ ಸೂರ್ಯಮಿತ್ರ ಅವರಿಗೆ ಹೇಳುತ್ತಾನೆ. 'ನಾನು ನಿಮ್ಮ ಸೋದರ ಮಾವನೇ ಹೌದು. ಹಾಗೆಂದು ಮೊದಲೇ ತಿಳಿಸಿದ್ದರೆ, ನೀವು ಸರಿಯಾಗಿ ಓದದೆ ಕೆಟ್ಟುಹೋಗುತ್ತಿದ್ದಿರಿ. ನಿಮ್ಮನ್ನು ಪಂಡಿತರನ್ನಾಗಿ ಮಾಡುವುದಕ್ಕಾಗಿ ನಾನು ಹೀಗೆ ನಿರ್ದಯೆಯಿಂದ ವರ್ತಿಸಬೇಕಾಯಿತು. ಅದಕ್ಕಾಗಿ ಕ್ಷಮಿಸಿ'. ಇದನ್ನು ಕೇಳಿ, ಸೋದರಮಾವನಿಂದ ಉಪಕಾರವೆ ಆಯಿತೆಂದು ಅಗ್ನಿಭೂತಿ ಹಿಗ್ಗುತ್ತಾನೆ. ಆದರೆ ವಾಯುಭೂತಿ, ತಮ್ಮನ್ನು ಮಾವ ಶತ್ರುಗಳನ್ನು ದಂಡಿಸುವಂತೆ ದಂಡಿಸಿ ಅಪಕಾರ ಮಾಡಿದನೆಂದು ಭಾವಿಸಿ ಕೋಪಿಸಿಕೊಂಡು ಹೋಗುತ್ತಾನೆ. ಮುಂದೆ ಅದರಿಂದ ದುರಂತ ಪರಂಪರೆಯೆ ಸಂಭವಿಸುತ್ತದೆ.

ಇಲ್ಲಿ, ವಿದ್ಯೆ ಎಂದರೇನೆಂಬ ಒಂದು ಮೂಲಭೂತ ಪ್ರಶ್ನೆ ಎದುರಾಗುತ್ತದೆ. ವಾಯುಭೂತಿ ಪ್ರಕಾಂಡಪಂಡಿತನಾಗಿದ್ದಾನೆ; ಆದರೆ ಅದರಿಂದ ಯಾವ ಸಂಸ್ಕಾರವನ್ನೂ ಅವನು ಪಡೆದಿಲ್ಲ. ನಿಜವಾದ ವಿದ್ಯೆಯಿಂದ ವಿನಯ, ಸಂಸ್ಕಾರಗಳು ಸಿದ್ಧಿಸಬೇಕು. ಪಾಂಡಿತ್ಯವೇ ವಿದ್ಯೆಯಲ್ಲ. ಈ ದೃಷ್ಟಿಯಿಂದ, ವಾಯುಭೂತಿಗೆ ವಿದ್ಯೆ ಸಿದ್ಧಿಸಿಲ್ಲ. ಆದರೆ ಅಗ್ನಿಭೂತಿಯಲ್ಲಿ ವಿದ್ಯಾವಂತನಾಗಿ ಕಾಣುತ್ತಾನೆ. ಆದ್ದರಿಂದ ಯಾವುದು ನಿಜವಾದ ವಿದ್ಯೆ, ಯಾವುದಲ್ಲ ಎಂಬುದನ್ನು ಈ ಇಬ್ಬರು ಸೋದರರು ಇಲ್ಲಿ ತಮ್ಮ ತಮ್ಮ ವರ್ತನೆಯಿಂದ ನಿದರ್ಶಿಸುತ್ತಾರೆ.

ಹಾಗೆ ನೋಡಿದರೆ, ವಿದ್ಯೆ ಎಂಬ ಮಾತಿಗೆ ಭಾರತೀಯ ಪರಂಪರೆಯಲ್ಲಿ ಬಹು ವ್ಯಾಪಕವಾದ ಅರ್ಥವುಂಟು; ಯಾವುದು ಮೋಕ್ಷವನ್ನು ದೊರಕಿಸಿಕೊಡುತ್ತದೋ ಅದು ವಿದ್ಯೆ. ಮೋಕ್ಷವೆಂದರೆ ಸತ್ತ ಮೇಲೆಯೇ ಸಿಗತಕ್ಕದ್ದಲ್ಲ; ಬದುಕಿರುವಾಗಲೇ, ಈ ಇಹದಲ್ಲೇ ಗಳಿಸಬೇಕಾದದ್ದು. ಮನುಷ್ಯ ದೈವತ್ವಕ್ಕೇರುವುದು ಹಾಗಿರಲಿ, ಪಾಶವೀ ಪ್ರವೃತ್ತಿಗಳಿಂದ ಪಾರಾಗಿ, ನಿಜವಾದ ಮನುಷ್ಯನಾದರೆ ಸಾಕಾಗಿದೆ. ಅದು ವಿದ್ಯೆಯ ಧ್ಯೇಯ. ಇಂಥ ಬಿಡುಗಡೆಯನ್ನು ದೊರಕಿಸತಕ್ಕ ವಿದ್ಯೆಯನ್ನು ಲೋಕೋತ್ತರ ಅಥವಾ ಆಧ್ಯಾತ್ಮಿಕ ಎಂದು ನಿರ್ದೇಶಿಸಬಹುದು.

ಆದರೆ ಮಾನವಜೀವನದ ಪರಿಪೂರ್ಣತೆಗೆ ವಿದ್ಯೆಯೊಂದೇ ಸಾಲದು; 'ಅವಿದ್ಯೆ'ಯೂ ಅಗತ್ಯ. ಅವಿದ್ಯೆಯೆಂದರೆ ಅಜ್ಞಾನವೆಂದು ಅರ್ಥವಲ್ಲ; ಲೌಕಿಕ ವಿದ್ಯೆ ಎಂದಷ್ಟೆ. ಉಪನಿಷತ್ತು ಹೇಳುತ್ತದೆ. 'ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾ ಅಮೃತಮಶ್ನುತೇ' ಎಂದು(ಎಂದರೆ, ಮನುಷ್ಯ ಅವಿದ್ಯೆಯಿಂದ ಮೃತ್ಯುವನ್ನು ದಾಟಿ, ವಿದ್ಯೆಯಿಂದ ಅಮೃತವನ್ನು ಉಣ್ಣುತ್ತಾನೆ.) ಮೃತ್ಯುವನ್ನು ಗೆಲ್ಲಬೇಕಾದುದು ಮಾನವನ ಮೊದಲ ಕೆಲಸ; ಅವನು ಅನ್ನ ಬಟ್ಟೆಗಳನ್ನು ಗಳಿಸಬೇಕು, ರೋಗಗಳಿಗೆ ಮದ್ದು ಮಾಡಬೇಕು, ಇತರ ಸೌಕರ್ಯ ಸೌಲಭ್ಯಗಳನ್ನೂ ಕಲ್ಪಿಸಿಕೊಳ್ಳಬೇಕು. ಈ ಶರೀರ ಸುಸ್ಥಿತಿಯಲ್ಲಿದ್ದರೆ ತಾನೆ ಮುಂದಿನ ಸಾಧನೆ? ಈ ದಿಶೆಯಲ್ಲಿ ಲೌಕಿಕ ವಿದ್ಯೆಗಳು ನೆರವಾಗುತ್ತವೆ. ಆದರೆ ಆ ಅವಿದ್ಯಾ ಸಮುಚ್ಚಯವೇ ಸರ್ವಸ್ವವಲ್ಲ. ಮೃತ್ಯುವಿನಿಂದ ಪಾರಾದರೆ ಸಾಲದು; ಅದು ನೇತ್ಯಾತ್ಮಕವಾದ, ಅರ್ಧಸಿದ್ಧಿ ಮಾತ್ರ. ಅದಕ್ಕಿಂತ ಮುಖ್ಯವಾದದ್ದು ಅಮೃತತ್ವ ಲಾಭ; ಇದು ವಿದ್ಯೆಯ ಫಲ. ಇದರಿಂದ ಪೂರ್ಣಸಿದ್ಧಿ ಹೀಗೆ ಅವಿದ್ಯೆ-ವಿದ್ಯೆಗಳ, ಲೌಕಿಕ-ಪಾರಮಾರ್ಥಿಕಗಳ ಸಮನ್ವಯವನ್ನು ಒತ್ತಿ ಹೇಳುತ್ತದೆ, ಉಪನಿಷತ್ತು. ಇದು ಎಲ್ಲರಿಗೂ ಗ್ರಾಹ್ಯವಾದದ್ದು.

'ಮನುಷ್ಯ ಮೀನಿನಂತೆ ನೀರಿನಲ್ಲಿ ಈಜುವುದನ್ನು ಕಲಿತಿದ್ದಾನೆ, ಹಕ್ಕಿಯಂತೆ ಗಾಳಿಯಲ್ಲಿ ಹಾರುವುದನ್ನು ಕಲಿತಿದ್ದಾನೆ, ಆದರೆ ನೆಲದಲ್ಲಿ ಮನುಷ್ಯನಂತೆ ಬಾಳುವುದನ್ನು ಕಲಿತಿಲ್ಲ' ಎಂಬ ಹೇಳಿಕೆಯೊಂದನ್ನು ಇಲ್ಲಿ ನೆನೆಯಬಹುದು. ಅಜ್ಞಾನವನ್ನು ಗೆದ್ದು ಅವಿದ್ಯಾಕ್ಷೇತ್ರದಲ್ಲಿ ಮಾನವ ಏನೇಕು ಸಾಧಿಸಿದ್ದಾನೋ ಅದಕ್ಕಾಗಿ ಹೆಮ್ಮೆ ಪಡೋಣ; ಆದರೆ ಅವನ ಸಾಧನೆ ಇಷ್ಟರಲ್ಲೇ ಪರ್ಯವಸಾನಗೊಳ್ಳದೆ ವಿದ್ಯಾವಲಯಕ್ಕೆ ವಿಸ್ತರಿಸಲಿ ಎಂದು ಹಾರೈಸೋಣ. ಒಟ್ಟಿನಲ್ಲಿ ಬದುಕಿಗೆ ವಿದ್ಯೆ, ಅವಿದ್ಯೆ ಎರಡೂ ಬೇಕು; ಕುವಿದ್ಯೆ ಮಾತ್ರ ಬೇಡ, ಮೌಢ್ಯ ಬೇಡ. ವೈಯಕ್ತಿಕ ಸುಖಸಂಪತ್ತುಗಳಿಗಿಂತ ಸರ್ವೋದಯ ಗುರುತರವಾದದ್ದು; ಆ ಗುರಿಯತ್ತ ವಿದ್ಯೆ ನಮ್ಮನ್ನು ಕರೆದೊಯ್ಯಲಿ. ❖

* ನಂ. 2265/19, 6ನೇ ಕ್ರಾಸ್, 2ನೇ ಮೈನ್, ವಿನಾಯಕನಗರ, ಮೈಸೂರು -570 012.





# ಮಧುರ ವ್ಯಕ್ತಿತ್ವದ ಬಸವಣ್ಣ

ಡಾ|| ಬಸವರಾಜ ಜಗಜಂಪಿ*

ಬಸವಣ್ಣ ಈ ಪ್ರಪಂಚದ ಅದ್ಭುತ ಸೃಷ್ಟಿ. ಅಣ್ಣನ ತತ್ತ್ವಗಳು ಸಾರ್ವಕಾಲಿಕ. ಸರ್ವಜನಾಂಗ ತೆರೆದ ಮನಸ್ಸಿನಿಂದ ಸ್ವೀಕರಿಸಿದವು. ಅಂತೆಯೇ ಬಸವಣ್ಣ ವಿಶ್ವಗುರು. ಎಲ್ಲರನ್ನು ನಮ್ಮವನೆಂದು ಒಪ್ಪಿ ಅಪ್ಪಿಕೊಂಡ ಕಾರಣ ಅಣ್ಣ ಮಹಾ ಮಾನವ. ಮಹಾಮಾನವನಾದರೂ ಅಣ್ಣನದು ಮಾನವೀಯ ವ್ಯಕ್ತಿತ್ವ, ಅಷ್ಟೇ ಮಧುರ ವ್ಯಕ್ತಿತ್ವ ಬಸವಣ್ಣ ಎಂಬ ವ್ಯಕ್ತಿಗಿಂತ ಆತನ ವ್ಯಕ್ತಿತ್ವ ಮುಖ್ಯ. ಬಸವಣ್ಣನದು ತುಂಬ ಪಾರದರ್ಶಕ ವ್ಯಕ್ತಿತ. ಅಂತೆಯೇ ನಡೆನುಡಿಗಳಲ್ಲಿ ಸಾಮರಸ್ಯ ಸಾಧಿಸಿದ ಬಸವಣ್ಣ ಇಂದಿಗೂ ಪ್ರಸ್ತುತ. ಆತನ ಚಿಂತನೆಗಳು ಎಂದೆಂದಿಗೂ ಪ್ರಸ್ತುತ.

'ಮಹಾತ್ಮರಂ ನೆನೆವುದೆ ಘನಮುಕ್ತಿಪದಂ ಶಿವಾಧವಾ' ಎಂಬಂತೆ ಬಸವಣ್ಣನಂಥ ಮಹಾನುಭಾವರನ್ನು ನೆನೆದರೆ ಮನಸ್ಸು ಮುದಗೊಳ್ಳುತ್ತದೆ. ಹೆಚ್ಚೇನು? ಬಿಸಿಲು ಬೆಳದಿಂಗಳಾಗುತ್ತದೆ. ಹಿತವಾದ ಅನುಭವ ನೀಡುತ್ತದೆ. ಬಸವಣ್ಣ ಭಾವೈಕ್ಯದ ತುತ್ತತುದಿಗೇರಿದ ಮಹಾತ್ಮ. ಅಂತೆಯೇ ಅಣ್ಣ ಬೋಧಿಸಿದ ಲಿಂಗಾಯತ ಧರ್ಮ ಎಲ್ಲರನ್ನು ತನ್ನವರಾಗಿಸಿ ಕೊಂಡು ವಿಶ್ವಧರ್ಮವಾಯಿತು.

ಅಣ್ಣನ ಬಗೆಗೆ ಕವಿಗಳು ಹಾಡಿದರು. ಸಾಹಿತಿಗಳು ಕಥೆ, ಕಾದಂಬರಿ, ಚರಿತ್ರೆ-ಹೀಗೆ ಎಷ್ಟೆಲ್ಲ ಬರೆದರು. ಅವರವರ ಭಾವಕ್ಕೆ ತಕ್ಕಂತೆ ವರ್ಣಿಸಿದರು. ಆದರೆ ಅಣ್ಣ ಯಾರ ತೆಕ್ಕೆಗೂ ಸಿಕ್ಕದೇ ಇರುವುದು ಸತ್ಯ.

ವಿಶ್ವಗುರು, ಭಕ್ತಿಭಂಡಾರಿ, ಮಹಾತ್ಮ, ಭಗವಾನ್, ಕ್ರಾಂತಿಕಾರಿ, ಸಮಾಜಮುಖಿ ಚಿಂತಕ, ಮಹಾಮಾನವತಾವಾದಿ, ಭಾವೈಕ್ಯದ ಹರಿಕಾರ, ವಿಶ್ವವಿಭೂತಿಪುರುಷ, ವಿಶ್ವಮಾನವ, ಚತುರ ಸಂಘಟಕ, ಕಾರಣಿಕಪುರುಷ ಎಂದೆಲ್ಲಾ ಅಭಿವರ್ಣಿಸಿದರು. ಅಣ್ಣನ ವ್ಯಕ್ತಿತ್ವ ಇದೆಲ್ಲದರ ಆಚೆಗಿನದು. ಅಣ್ಣನ ಸಮಕಾಲೀನ ಶರಣಶ್ರೇಷ್ಠ ಮಡಿವಾಳ ಮಾಚಿದೇವರು ಹೇಳಿದ್ದು ಹೀಗೆ;

*ಎತ್ತೆತ್ತ ನೋಡಿದಡತ್ತತ್ತ ಬಸವನೆಂಬ ಬಳ್ಳಿ*
*ಎತ್ತ ನೋಡಿದಡೆ ಲಿಂಗವೆಂಬ ಗೊಂಚಲು*
*ಒತ್ತಿ ಹಿಂಡಿದಡೆ ಭಕ್ತಿಯೆಂಬ ರಸವಯ್ಯಾ*
*ಬಸವ ಬಸವ ಬಸವ ಎಂದು*
*ಮಜ್ಜನಕ್ಕೆರೆಯದವನ ಭಕ್ತಿ*
*ಶೂನ್ಯ ಕಾಣಾ ಕಲಿದೇವರ ದೇವ*

ನಿಜಕ್ಕೂ ಅಣ್ಣನ ವ್ಯಕ್ತಿತ್ವದ ಸಮರ್ಪಕ ಚಿತ್ರಣ ಇಲ್ಲಿದೆ. 'ಜಗದ ಹಿತಾರ್ಥವಾಗಿ ಬಂದ ಬಸವಣ್ಣ ಕಾಲೋಚಿತವ ಬಲ್ಲ, ಸಂಕಲ್ಪ ವಿಕಲ್ಪವ ಮಾಡುವವನಲ್ಲ, ಕ್ರಮಯುಕ್ತನಾಗಿಹ, ಷಟ್‌ಸ್ಥಲಭರಿತ, ಸರ್ವಾಂಗಲಿಂಗಿ, ದಾಸೋಹ ಸಂಪನ್ನ' ಎಂದು ಅಕ್ಕಮಹಾದೇವಿ ತನ್ನ ವಚನದಲ್ಲಿ ಅಣ್ಣನ ಘನವ್ಯಕ್ತಿತ್ವವನ್ನು ಚಿತ್ರಿಸಿದ್ದು ಸೂಕ್ತವಾಗಿದೆ.

ಅಲ್ಲಮಪ್ರಭುಗಳು ಕೊಂಡಾಡಿದಂತೆ ಬಸವಣ್ಣ 'ಯುಗದ ಉತ್ಸಾಹ' ಈ ಉತ್ಸಾಹ, ಲವಲವಿಕೆಗಳು ಅಣ್ಣನ ಸಾವಿರಾರು ವಚನಗಳಲ್ಲಿ ಎದ್ದುಕಾಣುತ್ತವೆ. ಪ್ರೇರಣೆ ನೀಡುತ್ತವೆ, ಉತ್ಸಾಹ ತುಂಬುತ್ತವೆ.

*'ಹಾಡಿದೊಡೆ ಎನ್ನೊಡೆಯನ ಹಾಡುವೆ*
*ಬೇಡಿದೊಡೆ ಎನ್ನೊಡೆಯನ ಬೇಡುವೆ'*

ಎಂದು ಘೋಷಿಸಿದ ಬಸವಣ್ಣ ನಡೆನುಡಿ ಒಂದಾದ ಅಚ್ಚ ಶರಣ, ಸಜ್ಜನಿಕೆಯ ಬದುಕನ್ನು ಹೇಗೆ ಬದುಕುವುದು, ಬದುಕಿದಂತೆ ಬರೆವುದು, ಬರೆದಂತೆ ಬದುಕುವುದು ಹೇಗೆ ಎಂಬುದನ್ನು ಸಾಧಿಸಿ ತೋರಿದ ಧೀಮಂತ. ನಮ್ಮ ನಾಡುಕಂಡ ಮಹಾಚೇತನಶಕ್ತಿಯಾದ ಬಸವಣ್ಣನ ಬದುಕೇ ಒಂದು ಸುಂದರ ಮಹಾಕಾವ್ಯ.

ಬಸವಣ್ಣನದು ವೀರ ವಿನಯಗಳ ಕೂಡಲ ಸಂಗಮದ ವ್ಯಕ್ತಿತ್ವ, 'ಬಿಜ್ಜಳನ ಭಂಡಾರ ಎನುಗೇತಕಯ್ಯ' ಎಂದು ಪ್ರಶ್ನಿಸಿದ ಧೀರ ವ್ಯಕ್ತಿ ಬಸವಣ್ಣ. ಅಣ್ಣನಂತೆ ಅಂತರಂಗ ನಿರೀಕ್ಷೆ ಮಾಡಿಕೊಂಡವರು ವಿರಳ. ಅಂತೆಯೇ

* ಪ್ರಾಂಶುಪಾಲರು, ಲಿಂಗರಾಜ ಕಾಲೇಜ್, ಕಾಲೇಜು ರಸ್ತೆ, ಬೆಳಗಾವಿ-೫೯೦ ೦೦೧.

'ಬಸವಣ್ಣನಂತೆ ನನಗೆ ಬದುಕಲು, ತತ್ವಗಳನ್ನು ಬೋಧಿಸಲು ಆಗಲಿಲ್ಲ. ಬೋಧಿಸಿದಂತೆ ಆಚರಿಸಲು ನನಗೆ ಆಗಲಿಲ್ಲ' ಎಂದರು ಮಹಾತ್ಮಾ ಗಾಂಧೀಜಿ. ಆತ್ಮ ವಿಮರ್ಶೆಯಲ್ಲಿ ಇಂದು ನಾವು ಗಾಂಧೀಯವರನ್ನು ಉದಾಹರಿಸುತ್ತೇವೆ. ಅಂದು ಬಸವಣ್ಣ ತನ್ನ ಅಂತರಂಗ ನಿರೀಕ್ಷೆ ಮಾಡಿಕೊಂಡ ರೀತಿ ಅದ್ಭುತವಾಗಿದೆ.

*'ಎನ್ನಚಿತ್ತವು ಅತ್ತಿಯ ಹಣ್ಣು ನೋಡಯ್ಯ*
*ವಿಚಾರಿಸಿದೊಡೇನೂ ಹುರುಳಿಲ್ಲವಯ್ಯಾ'*

ಎಂಬ ಮಾತಿನಲ್ಲಿ ಅಣ್ಣ ತನ್ನ ವ್ಯಕ್ತಿತ್ವದ ಒಳಹೊರಗನ್ನು ನಿಚ್ಚಳವಾಗಿ ತೋಡಿಕೊಂಡಿದ್ದಾನೆ. ಅದೇ ವಚನ ಸಾಹಿತ್ಯ ವೆನಿಸಿತು. ಕನ್ನಡದ ಅಪೂರ್ವ ಆಸ್ತಿಯಾಯಿತು. 'ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ' ಎಂದು ಆಪ್ತ ಸಲಹೆ ಕೊಡುವ ಬಸವಣ್ಣ ಅಚ್ಚಕನ್ನಡದಲ್ಲಿ ತನ್ನ ಸಾಮಾಜಿಕ ಚಿಂತನೆಗಳನ್ನು ಸರಳವಾಗಿ ಬಿಚ್ಚಿಟ್ಟ ಕನ್ನಡವನ್ನೇ ದೇವಭಾಷೆಯ ಮಟ್ಟಕ್ಕೇರಿಸಿದ ಶ್ರೇಯಸ್ಸಿಗೆ ಪಾತ್ರನಾದ. ಅಂತೆಯೆ ಶಂ.ರಾ ದಿವಾಕರರು ರಚಿಸಿದ 'ವಚನಶಾಸ್ತ್ರರಹಸ್ಯ' ಎಂಬ ಉದ್ಗ್ರಂಥವನ್ನು ಓದಿ ಕನ್ನಡ ಪ್ರೀತಿ ಬೆಳೆಸಿಕೊಂಡೆ, ಅಣ್ಣನವರ ಜೀವನಚರಿತ್ರೆಯನ್ನು ಬರೆಯಲು ಶಕ್ತನಾದೆ' ಎನ್ನುತ್ತಾರೆ ಅನಕೃ.

'ಬಸವಣ್ಣ ಮಹಾನ್ ಭಾರತದ ಮೊಟ್ಟಮೊದಲ ಮುಕ್ತ ವಿಚಾರವಾದಿ' ಎಂಬ ಆರ್ಥರ್ ಮೈಲ್ಸ್‌ನ ಮಾತು ಈ ಸಂದರ್ಭದಲ್ಲಿ ಸ್ಮರಣೀಯ. ಅದರೊಂದಿಗೆ ಪ್ರೊ.ಆರ್.ಕೆ. ಶ್ರೀಕಂಠನ್ ಅವರ

Simple like Mahaveera
Kind like Buddha
Gentle like Jesus
Bold like Mohammad
Basava strikes us almost 'A wonder of creation' ಎಂಬ ಉದ್ಘೋಷ ಅದ್ಭುತವಾಗಿದೆ. ಈ ಪ್ರಪಂಚದಲ್ಲಿ ಹಲವಾರು ಚಿಂತಕರು, ದಾರ್ಶನಿಕರು, ಸಮಾಜ ಸುಧಾರಕರು ಆಗಿದ್ದಾರೆ. ಆದರೆ ಬಸವಣ್ಣನನ್ನು ಸರಿಗಟ್ಟಿದವರು ಯಾರೂ ಇಲ್ಲ. ಮಹಾವೀರ, ಬುದ್ಧ, ಕ್ರಿಸ್ತ, ಮೊಹಮ್ಮದ್ ಮೊದಲಾದವರು ಒಂದೊಂದು ಗುಣದಿಂದ ಮಹಾನ್ ಸ್ಥಾನಕ್ಕೇರಿದವರು. ಮೇಲೆ ಹೇಳಿದ ಒಟ್ಟು ಗುಣಗಳ ಸಮಗ್ರ ವ್ಯಕ್ತಿತ್ವ ಅಣ್ಣನದು. ಅಂತೆಯೇ ಅಣ್ಣ ಈ ಪ್ರಪಂಚದ ಅದ್ಭುತ ವ್ಯಕ್ತಿ.

ಬಸವಣ್ಣ ಈ ನೆಲದ ಭಾಷೆ, ಸಂಸ್ಕೃತಿ, ಸಂಸ್ಕಾರಗಳನ್ನು ಅಚ್ಚುಕಟ್ಟಾಗಿ, ಅರ್ಥಪೂರ್ಣವಾಗಿ ಅಳವಡಿಸಿಕೊಂಡ ಸುಪುತ್ರ. ಆತ್ಮಕಲ್ಯಾಣದೊಂದಿಗೆ ವಿಶ್ವಕಲ್ಯಾಣ ಸಾಧಿಸಿದ ಮಹಾನ್ ಸಾಧಕ. 'ದಯವೇ ಧರ್ಮದ ಮೂಲವಯ್ಯಾ' ಎಂದು ಸಾರಿದ ಧೀಮಂತ. ಸಂಸಾರದಲ್ಲಿದ್ದುಕೊಂಡೇ ಸದ್ಗತಿ ಕಂಡ ಸದ್ಗೃಹಸ್ಥ. ಜಾತ್ಯಾತೀತ ಸಮಾಜ ಕಟ್ಟಬೇಕೆನ್ನುವ ಕನಸುಗಾರ. ಕನಸನ್ನು ನನಸಾಗಿಸಿದ ಛಲವಂತ.

ನುಡಿದರೆ ಮುತ್ತಿನ ಹಾರದಂತಿರಬೇಕು ಎಂಬ ಬಸವಣ್ಣ ಕಾಯಕ, ದಾಸೋಹದಂಥ ಮೌಲ್ಯಗಳ ಪ್ರತಿಪಾದಕ. ನಿಷ್ಠಾವಂತ ಪ್ರಚಾರಕ ಜೊತೆಗೆ ಸಂಘಟನಾ ಚತುರನೂ ಹೌದು. ಕೆಳವರ್ಗದ ಜನರನ್ನು ಸಂಘಟಿಸಿದ ಮಹಾನ್ ಸಂಘಟಕ ಬಸವಣ್ಣ ಅವರೊಂದಿಗೆ ಇದ್ದು ನೊಂದವರ ದನಿಯಾದ. ಸಂಘಟನೆಯನ್ನು ದೊಡ್ಡದಾಗಿ ಬೆಳೆಸಿದ. ಸತ್ಯ ಶುದ್ಧ ಕಾಯಕ ಮಾಡುವಂತೆ ಪ್ರೇರೇಪಿಸಿದ. ಕಾಯಕದ ಬಗೆಗೆ ಹೊಸ ಪ್ರಜ್ಞೆ ಮೂಡಿಸಿದ. ಜನಪದರಿಗಂತೂ ಕಾಯಕದ ನಾಯಕನಾದ. ದುಡಿಮೆಯ ಮೂಲಕ ಸಮೃದ್ಧ ಜೀವನ ನಡೆಸುವಂತೆ ಮಾಡಿದ. ಉಣಲು, ಉಡಲು, ಸಾರ್ಥಕವಾಗಿ ಬದುಕಲು ಕಲಿಸಿದ. ಒಳ್ಳೆಯ, ಹಿತಕರವಾದ, ಉದಾತ್ತ ವಿಚಾರಗಳು ಎಲ್ಲಿಂದ ಬಂದರೂ ತೆರೆದ ಮನಸ್ಸಿನಿಂದ ಸ್ವೀಕರಿಸಿದ. ತನ್ನ ಚಿಂತನೆಗಳಿಗೆ ಬೆರೆಸಿದ. ವಚನಗಳ ರೂಪದಲ್ಲಿ ಉಸಿರಿದ. ಕೂಡಲಸಂಗಮದೇವನ ಈ ಲೋಕವನ್ನು ತಮತಮಗೆ ಹಂಚಿಕೊಳ್ಳುವಂತೆ ಕರೆಕೊಟ್ಟ ರಾಷ್ಟ್ರಕವಿ ರಸಋಷಿ ಕುವೆಂಪು ಅವರು ಬಸವಣ್ಣನ ಬಗೆಗೆ ಕವಿತೆ ರಚಿಸಿದ್ದು ಇಲ್ಲಿ ಗಮನಾರ್ಹ ಬಸವಣ್ಣ

*'ಕಾರ್ತಿಕದ ಕತ್ತಲಲಿ ಆಕಾಶದೀಪವಾಗಿ ನೀ ಬಂದೆ*
*ಬಟ್ಟೆಗೆಟ್ಟವರಿಗೊಂದು ದೊಂದಿದಿಕ್ಕಾಗಿ*
*ಎಂಟು ಶತಮಾನಗಳ ಹಿಂದೆ'*

ಎಂದಿದ್ದು ಎಷ್ಟೊಂದು ಅರ್ಥಪೂರ್ಣ. ಬಸವಣ್ಣ ಈ ಪ್ರಪಂಚಕ್ಕೆ ಬೆಳಕಾಗಿ ಬಂದವನು. ಅಂತೆಯೇ ಅವನು ಜಗಜ್ಯೋತಿ. ಬೆಳಕಿನಿಂದ ಮಹಾಬೆಳಕಿನೆಡೆಗೆ ಸಾಗಿದ ನಿಜ ಜಗಜ್ಯೋತಿ. ಇನ್ನೋರ್ವ ರಾಷ್ಟ್ರಕವಿ ಡಾ॥ ಜಿ.ಎಸ್. ಶಿವರುದ್ರಪ್ಪ ನವರು ವರ್ಣಿಸಿರುವುದು ತುಂಬ ವಿಶಿಷ್ಟವಾಗಿದೆ.

*'ಇರಬಹುದು ನಿನಗಿಂತ ಅನುಭಾವದಲ್ಲಿ ದೊಡ್ಡವರು*
*ಮೇಲೇರಿ ಬಯಲಾದವರು*
*ಇರಬಹುದು ನಿನಗಿಂತಲೂ ದೊಡ್ಡ ತ್ಯಾಗಿಗಳು*
*ವಿರಾಗಿಗಳು*
*ಇರಲಾರರೆಂದೇ ತೋರುತಿದೆ ನಿನ್ನಂತೆ*
*ನಿನ್ನೊಳಗಿನಂಕುಡೊಂಕುಗಳನ್ನು ಕಂಡುಕೊಂಡವರು.*
*ಹೀಗಾಗಿ ನಿನ್ನ ಮಾತೆಲ್ಲ ಮುತ್ತಿನಹಾರ*
*ನಡೆಯೆಲ್ಲ ಲಿಂಗವೆ ಮೆಚ್ಚಿ ಅಹುದೆಂಬ ಪರಿ*
*ಇಲ್ಲಿ ಸಂದದ್ದು ಅಲ್ಲಿಯೂ ಸಲುವಂತೆ ಬದುಕಿದ*
*ನೀನು ಸಂಗನ ಮುಂದೆ ಕರ್ಪೂರ ಉರಿದಂತೆ*

ಎಂದಿರುವುದು ಸೂಕ್ತ. ಬಸವಣ್ಣನಿಗಿಂತ ಹಿರಿಯರು, ದೊಡ್ಡವರು ಅದೆಷ್ಟೋ ಜನ ಮಹಾನುಭಾವರು ಆಗಿ ಹೋಗಿದ್ದಾರೆ. ಅಂತೆಯೇ ಕಾದಂಬರಿ ಸಾರ್ವಭೌಮ ಅ.ನ. ಕೃಷ್ಣರಾಯರ ಮಾತು ನೆನಪಿಗೆ ಬರುತ್ತದೆ.

'ಬಸವನ ಸಮಾನರು ಯಾರು ಎಂದರೆ ಅವರೇ ಎಂದು ಹೇಳಬೇಕಾಗುತ್ತದೆ' ಹೌದು, ಗಗನಕೆ ಗಗನವೆ ಸಾಟಿ. ಸಮುದ್ರಕ್ಕೆ ಸಮುದ್ರವೇ ಸರಿಸಮಾನ. ಸಾಮಾನ್ಯ ಕರಣಿಕನಾಗಿದ್ದ ಬಸವಣ್ಣ ಕಾರಣಿಕ ಪುರುಷನಾಗಿ ಬೆಳೆದದ್ದು ಪವಾಡವೇನಲ್ಲ. ಅದರ ಹಿಂದೆ ಪರಿಶ್ರಮದ ದುಡಿಮೆ ಇದೆ. ಹೋರಾಟ ಇದೆ. ಸಾಮಾಜಿಕ ಕಾಳಜಿ ಕಳಕಳಿಗಳಿವೆ. ಶೋಷಿತರ ಬಗೆಗೆ ಅಣ್ಣನ ಕಾಳಜಿ ಅಗಾಧ-ಅನನ್ಯ. ಸಕಲ ಜೀವಾತ್ಮರಿಗೆ ಲೇಸನೆ ಬಯಸಿದ ಮಹಾಶರಣ. ಸಮಾಜದ ಕಟ್ಟಕಡೆಯ ವ್ಯಕ್ತಿಗೂ ಸಮಾನತೆ ದೊರಕಿಸಿ ಕೊಡಲು ಹೋರಾಡಿದ ವಿಶ್ವಬಂಧು. ಅಂತೆಯೇ ಬಸವಣ್ಣನ ನೆನಪು ಇಂದಿಗೂ ಮಧುರ, ಅಮರ. ❖

ಸೌಜನ್ಯ, ವಿನಯ, ನಮ್ರವಾಣಿ, ಮೃದುವಚನದಿಂದ ಆನಂದವೇ ಉಂಟಾಗುತ್ತದೆ. ಮಾತು ಮನುಷ್ಯನ ಅಳತೆಯ ಸಾಧನ. ಸಜ್ಜನ-ದುರ್ಜನ ನಿರ್ಣಯವಾಗಬೇಕಾದರೆ ಮಾತಿನಿಂದಲೇ ಸಾಧ್ಯ. ಶತ್ರುತ್ವ-ಮಿತ್ರತ್ವ ಬರುವುದಕ್ಕೆ ಕಾರಣ: ಮಾತು ಕಠೋರವಾದರೆ ಶತ್ರು, ಮಾತು ವಿನಯ ಸೌಜನ್ಯವಾದಾಗ ಮಿತ್ರ. —ಶ್ರೀವಾಣಿ

## ಏನಿದು ೧,೧೧,೧೧೧ ಒಂದು ಲಕ್ಷದ ಹನ್ನೊಂದು ಸಾವಿರದ ನೂರಾಹನ್ನೊಂದು

**ಶ್ರೀ ಸಂಗಮೇಶ ಮೇಲ್ಮುರಿ,** ಧಾರವಾಡ ಜಿಲ್ಲೆ, ಬ್ಯಾಡಗಿಯವರು. ಶ್ರೀ ಕೊಟ್ರಪ್ಪ ಮತ್ತು ಶ್ರೀಮತಿ ಗಂಗಮ್ಮನವರ ಸುಪುತ್ರರು. ಭಾರತೀಯ ಜೀವವಿಮಾ ನಿಗಮದಲ್ಲಿ ಅಧಿಕಾರಿಗಳಾಗಿ ವೃತ್ತಿಜೀವನದಿಂದ ನಿವೃತ್ತರಾಗಿರುವ ಸೇವಾಶೀಲರು. ಗದಗದಲ್ಲಿ ಜೀವವಿಮಾ ಶಾಖೆಯಲ್ಲಿ ಪ್ರಥಮ **'ಕೋಟಿವೀರ'** ಹೆಸರಿಗೆ ಪಾತ್ರರಾದವರು. ಶ್ರೀ ರಾಮದೇವ ಗುರೂಜಿಯಿಂದ ಯೋಗ ವಿದ್ಯೆಯನ್ನು ಕಲಿತವರು. ಉಚಿತವಾಗಿ ಪ್ರಾಣಾಯಾಮ ಯೋಗವನ್ನು ಸಾರ್ವಜನಿಕರಿಗೆ ಕಲಿಸುತ್ತಿರುವ ಯೋಗ ಪ್ರಚಾರ ನಿರತರು. ಲಿಂಗೈಕ್ಯ ಡಾ॥ ಪಂ. ಪುಟ್ಟರಾಜ ಗವಾಯಿಗಳಿಗೆ ತುಲಾಭಾರ ಸೇವೆ ಸಲ್ಲಿಸಿದ ಧನ್ಯ ಭಾವಿಗಳು. ಆಚಾರನಿಷ್ಠೆ, ಪರೋಪಕಾರ, ಗುರುಲಿಂಗ ಜಂಗಮ ಸೇವೆಯಲ್ಲಿ ಆಸಕ್ತರು. ಗುರುಕರುಣ ತ್ರಿವಿಧಿ, ಕೃತಿ ಬಿಡುಗಡೆಗೆ ಕಾರಣರು. ತಮ್ಮ ಜನ್ಮಸ್ಥಳದಲ್ಲಿ ಸಂಸ್ಕೃತ ವೈದಿಕ ಯೋಗಶಾಲೆಗೆ ಕಟ್ಟಡ ನಿರ್ಮಿಸಿಕೊಟ್ಟ ಪುಣ್ಯ ಜೀವಿಗಳು. ಬಾಬಾರಾಮದೇವ ಗುರೂಜಿಗಳಿಗೆ ೧,೧೧,೧೧೧ ರೂಗಳ ಭಕ್ತಿಕಾಣಿಕೆಯನ್ನರ್ಪಿಸಿದ ದಾನಸಿರಿ. 'ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಎನ್ನುವಂತೆ, ಶಿವಸ್ವರೂಪವೇ ಆಗಿರುವ ಶ್ರೀ ಸಿದ್ಧಗಂಗಾ ಶ್ರೀ ಶ್ರೀಗಳವರಿಗೆ ಅವರ ೧೦೫ನೆಯ ಜನ್ಮದಿನೋತ್ಸವದಲ್ಲಿ ೧,೧೧,೧೧೧ ರೂಗಳನ್ನು ಭಕ್ತಿ ಕಾಣಿಕೆಯಾಗಿ ಸಮರ್ಪಿಸಿದ ದಾಸೋಹ ಪ್ರೇಮಿಗಳಾಗಿದ್ದಾರೆ.

ಶ್ರೀ ಸಂಗಮೇಶ ಮೇಲ್ಮುರಿಯವರಿಗೆ ಬಸವಾದಿ ಶರಣರು ಮತ್ತು ಗುರುಪರಂಪರೆ ಆಯುರಾರೋಗ್ಯ ಭಾಗ್ಯವನ್ನು ಅನುಗ್ರಹಿಸಲಿ ಎಂದು 'ಸಿದ್ಧಗಂಗಾ' ಹಾರೈಸುತ್ತದೆ.

# ಮಕ್ಕಳ ಸಾಹಿತ್ಯ ಮತ್ತು ಶಿಕ್ಷಣ

-ಡಾ॥ ವಿಜಯದೇವಿ *

*ಕೊಟ್ಟ ಭಾಷೆಗೆ ತಪ್ಪಲಾರೆನು*
*ಕೆಟ್ಟ ಯೋಚನೆ ಮಾಡಲಾರೆನು*
*ನಿಷ್ಠೆಯಿಂದಲಿ ಪೋಷೆನಲ್ಲಿಗೆ*
*ಕಟ್ಟಕಡೆಗಿದು ಖಂಡಿತ.*

ಗೋವಿನ ಹಾಡು ಕೇಳದವರಾರು? ಎಲ್ಲರೂ ಬಾಲ್ಯ ಕಾಲದಲ್ಲಿ ಈ ಗೋವಿನ ಹಾಡು ಪಾಠ ಕೇಳಿದ್ದೇವೆ. ಇಂದು ಈ ಗೋವಿನ ಹಾಡು ಪಠ್ಯವಿಷಯದಲ್ಲಿ ಇಲ್ಲವೇ ಇಲ್ಲ. ಮೇಯಲು ಹೋಗಿದ್ದ ಪುಣ್ಯಕೋಟಿ ಎಂಬ ಹಸು ಕಾಡಿನಿಂದ ಹಿಂದಿರುಗುವಾಗ ಹಿಂಡಿನಿಂದ ಹಿಂದುಳಿದು ಹುಲಿಗೆ ಸಿಕ್ಕಿ ಬೀಳುತ್ತದೆ. ಹುಲಿ ಕೊಂದು ತಿನ್ನುವ ಕಾಲಕ್ಕೆ ಪುಣ್ಯಕೋಟಿಯು ನಾನು ಒಂದು ನಿಮಿಷ ಕಂದನಿಗೆ ಮೊಲೆ ಕೊಟ್ಟು ಬರುತ್ತೇನೆ ಕಾಲಾವಕಾಶ ಮಾಡಿಕೊಡು ಎಂದು ಹುಲಿಗೆ ಭಾಷೆ ಕೊಟ್ಟು ಹೋಗುತ್ತದೆ. ಈ ಕಥೆ ನಮಗೆಲ್ಲ ಗೊತ್ತಿದೆ. ಪುಣ್ಯಕೋಟಿ ತನ್ನ ಕರುವಿಗೆ ತಿಳುವಳಿಕೆ ಹೇಳಿ ನಾನು ಹುಲಿಗೆ ಆಹಾರವಾಗುತ್ತೇನೆ ಎಂದು ಹೊರಟ ಕಾಲಕ್ಕೆ, ಕರು ನೀನು ಹೋಗಬೇಡ ಇಲ್ಲಿಯೇ ಇರು. ಹುಲಿ ಏನು ನಿನ್ನನ್ನು ಇಲ್ಲಿ ಕೇಳಲು ಬರುವುದಿಲ್ಲ ಎಂದು ಕರು ಹೇಳುತ್ತದೆ. ಕೊಟ್ಟ ಭಾಷೆಗೆ ತಪ್ಪಲಾರೆನು. ಕೆಟ್ಟ ಯೋಚನೆ ಮಾಡಲಾರೆನು. ಒಂದು ಪುಣ್ಯಕೋಟಿಯು ಕೂಡ ತನ್ನ ಭಾಷೆಯನ್ನು ನಡೆಸಿಕೊಡುವ ಕಡೆಗೆ ಒತ್ತು ಕೊಡುತ್ತದೆ. ಗೋವಿನ ಹಾಡಿನ ಕರ್ತೃ ಜಗತ್ತಿನಲ್ಲಿ ಕೊಟ್ಟ ಭಾಷೆಯ ಸತ್ಯದ ಮಹತ್ವವನ್ನು ಗೋವಿನ ಹಾಡಿನ ಮೂಲಕ ಜೀವನದ ಮೌಲ್ಯವಾಗಿ ತಿಳಿಸಿಕೊಟ್ಟಿದ್ದಾನೆ ಆದರೆ ಇಂದು ನಮ್ಮ ಚಿಂತನೆ, ಆಲೋಚನೆಗಳು, ನಡವಳಿಕೆಗಳು ಯಾವ ದಿಕ್ಕಿನಲ್ಲಿವೆ.

ಶಿಕ್ಷಣ ಎಂದರೆ ಕಲಿಯುವಿಕೆ, ಜ್ಞಾನಾರ್ಜನೆ, ವಿದ್ಯೆ ಕಲಿಸುವಿಕೆ, ಬೋಧಿಸುವಿಕೆ ಎಂದು ನಿಘಂಟುಕಾರರು ಶಬ್ದಾರ್ಥವನ್ನು ಕೊಟ್ಟಿದ್ದಾರೆ. ಶಿಕ್ಷಣದಲ್ಲಿ ಮಕ್ಕಳ ಸಾಹಿತ್ಯವನ್ನು ಕಲಿಸಬೇಕು ಎನ್ನುವ ಅಭಿಪ್ರಾಯ ಶೀರ್ಷಿಕೆಯಲ್ಲಿದೆ. ವಿಜಾಪುರ ಮಹಿಳಾ ವಿಶ್ವವಿದ್ಯಾಲಯದಲ್ಲಿ ಕನ್ನಡ ವಿಭಾಗದ ನಿರ್ದೇಶಕಿಯಾಗಿ, ಪಠ್ಯವಿಷಯ ನಿರ್ದೇಶಕರಾಗಿ, ಸದಸ್ಯರಾಗಿ ಮಕ್ಕಳ ಸಾಹಿತ್ವವನ್ನು ಹಲವರ ವಿರೋಧದ ನಡುವೆಯೂ ಎಂ.ಎ. ವಿದ್ಯಾರ್ಥಿಗಳಿಗೆ ಪಠ್ಯ ವಿಷಯವಾಗಿ ರೂಪಿಸಿದ್ದೆವು. ಅನೇಕ ಎಂ.ಎ. ವಿದ್ಯಾರ್ಥಿಗಳಿಗೆ ಡೆಸರ್ಟೇಷನ್ ವಿಷಯವಾಗಿ ಕೂಡ ಸೂಚಿಸಿ ಅಧ್ಯಯನ ಮಾಡಿಸಿದ್ದೇನೆ. ಮಕ್ಕಳ ಸಾಹಿತ್ಯವನ್ನು ಮಕ್ಕಳಿಗೆ ಕಲಿಸಬೇಕು ಎನ್ನುವ ದಿಸೆಯಲ್ಲಿ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಪಠ್ಯ ವಿಷಯವಾಗಿ ಮಕ್ಕಳ ಸಾಹಿತ್ಯವನ್ನು ಓದುವಂತೆ ಪ್ರೇರಣೆ ನೀಡಿದ್ದೇನೆ. ಹಂಪಿಯಲ್ಲಿ ಕನ್ನಡ ವಿಶ್ವವಿದ್ಯಾಲಯವಿದೆ. ಅಲ್ಲಿ ಮಕ್ಕಳ ಸಾಹಿತ್ಯಕ್ಕೆ ಯಾವುದೇ ಪ್ರೋತ್ಸಾಹ, ಅಧ್ಯಯನ ಇಲ್ಲ. ಇಂತಹ ಸಂದರ್ಭದಲ್ಲಿ ಮಕ್ಕಳ ಸಾಹಿತ್ಯವನ್ನು ಸ್ನಾತಕ ವಿದ್ಯಾರ್ಥಿಗಳಿಗೆ ಪಠ್ಯವಿಷಯವಾಗಿ ಬೋಧಿಸುವುದು ಸರಿಯೆ? ಎಂದು ನನ್ನಲ್ಲಿಯೂ ಪ್ರಶ್ನೆ ಉಂಟಾಯಿತು. ಈ ಮಕ್ಕಳ ಸಾಹಿತ್ಯವು ಜೀವನ ಮೌಲ್ಯವನ್ನು ಕಲಿಸುತ್ತದೆ. ನಮ್ಮ ಎಂ.ಎ. ವಿದ್ಯಾರ್ಥಿಗಳು ಜೀವನಮೌಲ್ಯಗಳನ್ನು ಅಳವಡಿಸಿಕೊಳ್ಳುವುದು ತುಂಬ ಅಗತ್ಯವಿದೆ ಎಂದು ನಿರ್ಧರಿಸಿದೆ. ಅವರಿಗೆ ಕಲಿಸುವುದು ಪಾಠ ಹೇಳುವುದು ತುಂಬಾ ಸೂಕ್ತ ಎನಿಸಿತು. ಇಂದು ತರುಣ ಪೀಳಿಗೆಯಲ್ಲಿ ಬಹಳಷ್ಟು ತರುಣರು ಬೇರೆ ಬೇರೆ ತಪ್ಪುದಾರಿ ಹಿಡಿದು ನಾಡಿಗೆ, ಸಮಾಜಕ್ಕೆ ಕಳಂಕ ತರುವ ಹಾದಿಯಲ್ಲಿ ಹೆಜ್ಜೆ ಇಡುತ್ತಿರುವುದು ನೋವಿನ ಸಂಗತಿಯಾಗಿದೆ. ನಮ್ಮ ಯುವಕರಲ್ಲಿ ಮೌಲ್ಯಪ್ರಜ್ಞೆ, ನಾಡಾಭಿಮಾನ, ಕನ್ನಡ ಭಾಷಾಭಿಮಾನ, ನಮ್ಮ ಸಂಸ್ಕೃತಿ ಬಗೆಗೆ ಹೆಮ್ಮೆ ಮೂಡಿಸುವ ಕ್ರಿಯೆಯನ್ನು ಮಕ್ಕಳ ಸಾಹಿತ್ಯ ಸುಲಭ, ಸರಳದಲಿ ಮೂಡುತ್ತದೆ. ಗೋವಿನ ಹಾಡಿನ ಮೂಲಕ ಸತ್ಯನಿಷ್ಠೆ, ಕಿಂದರಿಜೋಗಿ ಕಥೆಯ ಮೂಲಕ ಕೊಟ್ಟ ಭಾಷೆ ತಪ್ಪಿದುದರ ದುಷ್ಪರಿಣಾಮ, ಪಂಚತಂತ್ರದ ಕಥೆಗಳ ಮೂಲಕ ಬುದ್ಧಿ, ಪ್ರತಿಭೆಗೆ ಮನ್ನಣೆ ಇಂತಹ ವಿಷಯಗಳೆಲ್ಲ ಮಕ್ಕಳ ಗಮನಕ್ಕೆ ಬರುತ್ತವೆ. ನಮ್ಮ ಸಂಸ್ಕೃತಿ ನಮ್ಮ ಹೆಮ್ಮೆ ಎಂಬ ಗೌರವ ಮಕ್ಕಳಿಗೆ ಬೇಕು. ಜೀವನ ಮೌಲ್ಯ ಉಳ್ಳ ಪಠ್ಯ ವಿಷಯಗಳನ್ನು ಕಲಿಸಿದಾಗ ಬದುಕಿನ ಅರಿವಾಗುತ್ತದೆ.

* ಪ್ರಾಧ್ಯಾಪಕರು, ಕನ್ನಡ ಅಧ್ಯಯನ ವಿಭಾಗ, ವಿಜಾಪುರ-೫೮೬ ೧೦೩.





*ಹಾವು ಅಂದ್ರೆ ಮರಿ ಗುಬ್ಬಿಗೆ ಭಾರಿ ದಿಗಿಲೇನೆ*
*ನೆನೆಸಿಕೊಂಡ್ರೆ ಮೈ ನಡುಗುತ್ತೆ ಹಾಡೆ ಹಗ್ಲೇನೆ.*

ಈ ಮಕ್ಕಳ ಪದ್ಯವನ್ನು ರತ್ನಮಾಲಾ ಅವರು ಏರಿಳಿತದ ಧಾಟಿಯಲ್ಲಿ ಹಾಡಿದಾಗ ಹಾವಿನ ಭಯವನ್ನು ಅನುಭವಕ್ಕೆ ತಂದುಕೊಳ್ಳುತ್ತಾರೆ. ಹಾವು ಕಂಡರೆ ಯಾರಿಗೆ ತಾನೆ ಭಯ ಇಲ್ಲ. ಇಂತಹ ಅನುಭವವನ್ನು ಎಲ್ಲರಿಗೆ ಭಾಷೆ, ಹಾಡಿನ ಲಯದಲ್ಲಿ ಮುಟ್ಟಿಸುವ ಪ್ರತಿಭೆ ಅನನ್ಯವಾದುದು. ಹೀಗೆ ಮಕ್ಕಳ ಸಾಹಿತ್ಯವು ಓದುತ್ತಿದ್ದಂತೆ ಹಾಡು ಕೇಳುತ್ತಿದ್ದಂತೆ ಎಲ್ಲರ ಗಮನ ಸೆಳೆಯುತ್ತದೆ. ಆದರೆ ಅದಕ್ಕೆ ಸಿಗಬೇಕಾದ ವೇದಿಕೆ, ಮಾನ್ಯತೆ ಮತ್ತು ಅವಕಾಶಗಳನ್ನು ಇನ್ನೂ ಹೆಚ್ಚು ಮಾಡಬೇಕಿದೆ. ಮಕ್ಕಳ ಮನೋಪ್ರಪಂಚವು ಬೆರಗು, ಅದ್ಭುತ, ಕುತೂಹಲ, ಕಲ್ಪನಾಪ್ರಪಂಚದಲ್ಲಿ ಹಕ್ಕಿಯಂತೆ ರೆಕ್ಕೆ ಬಿಚ್ಚಿ ಹಾರುವಂತದು. ನಾವು ಮಕ್ಕಳ ಮನಸ್ಸನ್ನು ವಿಧಾಯಕವಾಗಿ, ವೈಜ್ಞಾನಿಕ ಮನೋಧರ್ಮದಲ್ಲಿ ಹೆಚ್ಚು ಹೆಚ್ಚು ಬೆಳೆಸಬೇಕಾಗಿದೆ. ಅವರ ಪ್ರಶ್ನೆ ಹಾಕುವ ಉತ್ತರ ಪಡೆಯುವ ಸತ್ಯಶೋಧನೆ ಮಾಡುವ ಮನಸ್ಸನ್ನು ಹೆಚ್ಚು ವಿಕಾಸಗೊಳಿಸಬೇಕಾಗಿದೆ. ಜಗದೀಶ್ ಚಂದ್ರಬೋಸ್, ಸಿ.ವಿ. ರಾಮನ್, ವಿಶ್ವೇಶ್ವರಯ್ಯ ಇವರಂತಹ ಪ್ರತಿಭೆಗಳು ನಮ್ಮಲಿ ಮತ್ತೆ ಯಾಕೆ ಅರಳಲಿಲ್ಲ?

*ಮಕ್ಕಳಿಗೆ ತಂದೆ ಅರಿಪದಿರ್ದೊಡೆ ಕೊಂದಂ*
*ಲಕ್ಕಧನವಿರಲು ಕೆಡುಗುಂ*

ಈ ಪದ್ಯವು ಮಕ್ಕಳಿಗೆ ವಿದ್ಯೆಯನ್ನು ಜೀವನಮೌಲ್ಯಗಳನ್ನು ಕಲಿಸಿಕೊಡಬೇಕು ಎನ್ನುತ್ತದೆ.

*ಮನೆಯೆ ಮೊದಲ ಪಾಠಶಾಲೆ*
*ಜನನಿ ತಾನೆ ಮೊದಲ ಗುರುವು*
*ಜನನಿಯಿಂದ ಪಾಠ ಕಲಿತ ಜನರು ಧನ್ಯರು*

ನಾವೆಲ್ಲ ತಾಯಿಯಿಂದ ಅನೇಕ ಜೀವನ ಮೌಲ್ಯದ ಕತೆ, ಹಾಡು ಕೇಳಿ ಬೆಳೆದಿದ್ದೇವೆ. ಜನಪದ ಸಾಹಿತ್ಯದಲ್ಲಿ ಮಕ್ಕಳಿಗೆಂದೇ ಅನೇಕ ಸಾಹಿತ್ಯ ರಚನೆಯಾಗಿದೆ. ಈಗ ಎಂತಹ ಕಾಲದಲ್ಲಿ ನಾವಿದ್ದೇವೆ. ತಂದೆ, ತಾಯಿ ಇಬ್ಬರೂ ದುಡಿಯಲು ಹೋಗುತ್ತಾರೆ. ಮಕ್ಕಳನ್ನು ಎಲ್.ಕೆ.ಜಿ., ಯು.ಕೆ.ಜಿ. ಎಂದು ಶಾಲೆಗೆ ಸೇರಿಸುತ್ತಾರೆ. ಹಾಸ್ಟೆಲ್‌ಗಳಿಗೆ ಹಾಕಿಬಿಡುತ್ತಾರೆ. ಮಕ್ಕಳಿಗೆ ತಂದೆ, ತಾಯಿಯ ಸಾನ್ನಿಧ್ಯದಲ್ಲಿ ಕಲಿಯುವ ಅವಕಾಶವೇ ಸಿಗುತ್ತಿಲ್ಲ ಎಷ್ಟಾದರೂ ದುಡ್ಡು ಖರ್ಚಾಗಲಿ ನಮ್ಮ ಮಕ್ಕಳು ಓದಿ ಮುಂದೆ ಬರಬೇಕು ಎನ್ನುವ ಆಶಯ ತಂದೆ, ತಾಯಿಗಳದು. ಆದರೆ ಮಕ್ಕಳಿಗೆ ಮಕ್ಕಳ ಸಾಹಿತ್ಯವೊಂದು ಅವರ ಜೀವನ ಅರಳಿಸುವ ಮುಖ್ಯ ಘಟ್ಟ. ಈ ಕೊಂಡಿಯೇ ಕಳಚಿ ಹೋದರೆ ಮುಂದೆ ಅವರ ಜೀವನಕ್ಕೆ ಮಾದರಿಗಳು, ಮೌಲ್ಯಗಳ ಅರಿವು ಅಗುವುದೇ ಇಲ್ಲ. ಸ್ವತಃ ಓದಿ ತಿಳಿದುಕೊಳ್ಳುವ ಸಂದರ್ಭ ಎಷ್ಟು ಮಕ್ಕಳಿಗೆ ಸಾಧ್ಯ. ಆದ್ದರಿಂದ ಮಕ್ಕಳಿಗೆ ಶಾಲಾ ಕಾಲೇಜಿನಲ್ಲಿ ಮಕ್ಕಳ ಸಾಹಿತ್ಯವನ್ನು ಅದರಲ್ಲಿ ಜೀವನ ಮೌಲ್ಯಗಳ ಅರಿವು ಮೂಡಿಸುವ ಸಾಹಿತ್ಯವನ್ನು ಪಠ್ಯವಿಷಯವಾಗಿ ಅಳವಡಿಸುವ ಅಗತ್ಯ ತುಂಬ ಇದೆ. ನಮ್ಮ ಮಕ್ಕಳನ್ನು ಹೆಚ್ಚು ಹೆಚ್ಚು ಸತ್ಯಶೋಧನೆಯ ಕಡೆಗೆ, ವಿಜ್ಞಾನದ ಕಡೆಗೆ ಹೊರಳಿಸಬೇಕು. ನಮ್ಮ ಮಕ್ಕಳು ಸಚಿನ್ ತೆಂಡೂಲ್ಕರ್, ದೋನಿಯಂತಹ ಆಟಗಾರರಾಗಿ ರೂಪುಗೊಳ್ಳಬೇಕು. ನಮ್ಮ ಮಕ್ಕಳು ಕೋಟಿ ಕೋಟಿ ಗಳಿಸಿದರೆ ಅದರ ಮೂಲಕ ಕನ್ನಡ ಭಾಷೆಯೂ ಪ್ರಸಾರಗೊಳ್ಳುತ್ತದೆ. ಅವರ ಹಣಕಾಸಿನ ನೆರವೂ ಅವರ ಮೂಲಕ ಕನ್ನಡ ಭಾಷಾ ಸಾಹಿತ್ಯಕ್ಕೂ ಸಿಗುತ್ತದೆ. ನಮಗೆ ಆರ್ಥಿಕ ಸಂಪನ್ಮೂಲದ ಕೊರತೆ ಇರುವುದರಿಂದ ಕನ್ನಡದಲ್ಲಿ ಮಕ್ಕಳ ಸಾಹಿತ್ಯ ಮತ್ತು ಶಿಕ್ಷಣ ಬೆಳೆಸುವಲ್ಲಿ ಹಿನ್ನಡೆಯಾಗಿದೆ. ಇವತ್ತಿನ ಶಾಲಾ, ಕಾಲೇಜಿನ ಅಧ್ಯಾಪಕರು ಮತ್ತು ವಿಶ್ವವಿದ್ಯಾಲಯದ ಅಧ್ಯಾಪಕರು ಮುಖ್ಯವಾಗಿ ಎದುರಿಸುತ್ತಿರುವ ಸಮಸ್ಯೆ ಏನು? ವಿದ್ಯಾರ್ಥಿಗಳು ತರಗತಿಗಳಿಗೆ ಬರುತ್ತಿಲ್ಲ. ಟ್ಯೂಷನ್ ಇಂದು ಎಲ್ಲ ಕಡೆಗೆ ವ್ಯಾಪಕವಾಗಿದೆ. ವಿದ್ಯಾರ್ಥಿಗಳು ತರಗತಿಗಳ ಪಠ್ಯಗಳಿಗಿಂತ ಟ್ಯೂಷನ್‌ಗಳಿಗೆ ಮೊರೆ ಹೋಗಿದ್ದಾರೆ. ವಿದ್ಯಾರ್ಥಿಗಳೆಲ್ಲ ಮಾತಾಡಿಕೊಂಡು ಶಾಲೆಗೆ ಹೋಗದೆ ಅದೇ ವೇಳೆಯಲ್ಲಿ ಟ್ಯೂಷನ್‌ಗಳಿಗೆ ಹೋಗುತ್ತಿದ್ದಾರೆ. ಇದಕ್ಕೆ ತಂದೆ, ತಾಯಿಗಳ ಪ್ರೋತ್ಸಾಹವೂ ಇದೆ. ಪೋಷಕರಿಗೆ ಮತ್ತು ವಿದ್ಯಾರ್ಥಿಗಳಿಗೆ ಪಾಠಗಳನ್ನು ಮತ್ತು ಇತರ ಹೆಚ್ಚಿನ ಓದನ್ನು ಕಲಿಯುವ ಕಡೆಗೆ ಮನಸ್ಸು ಇಲ್ಲ. ಪರೀಕ್ಷೆಗೆ ವಿಷಯ ಏನಿದೆ? ಪರೀಕ್ಷೆಯಲ್ಲಿ ಏನು ಉತ್ತರ ಬರೆಯಬೇಕು? ಅದನ್ನು ಮಾತ್ರ ನಮಗೆ ಹೇಳಿಬಿಡಿರಿ. ನಮಗೆ ಅಂಕಗಳು ಮಾತ್ರ ಮುಖ್ಯ ಎನ್ನುವ ಅಭಿಪ್ರಾಯ ವಿದ್ಯಾರ್ಥಿಗಳಿಗೆ ಇದೆ. ಇಂತಹ ಸಮಸ್ಯೆ ಇಂದು ಶಾಲಾ ಕಾಲೇಜಿನ ಅಧ್ಯಾಪಕರಿಗೆ ಎದುರಾಗಿದೆ. ಅಲ್ಲದೆ ಪಠ್ಯವನ್ನು ಕಲಿಸುವ ಮತ್ತು ಹೆಚ್ಚಿನ ವಿಷಯಗಳನ್ನು ಪಾಠ ಹೇಳುವ ಸಂದರ್ಭವೇ ಅಧ್ಯಾಪಕರಿಗೆ ಒದಗಿ ಬರುತ್ತಿಲ್ಲ. ಇಂತಹ ವಾತಾವರಣ ಇರುವಾಗ ಮಕ್ಕಳ ಸಾಹಿತ್ಯ ಬರೆಯುವ ಉತ್ಸಾಹ ಸಾಹಿತಿಗಳಲ್ಲಿ ಕಾಣುತ್ತಿಲ್ಲ. ಕುವೆಂಪು ಬರೆದಂತಹ

ಮೋಡಣ್ಣನ ತಮ್ಮ ನನ್ನ ಗೋಪಾಲ ನಾಟಕ ಗಳು ಕಿಂದರಿಜೋಗಿ ನಾಗಿ ಎನ್ನುವ ಕಥನಗೀತೆಗಳು ಯಾಕೆ ಇಂದು ಸೃಷ್ಟಿ ಆಗುತ್ತಿಲ್ಲ ಎಂದು ನನಗೆ ನಾನು ಪ್ರಶ್ನೆ ಹಾಕಿಕೊಳ್ಳುತ್ತಿದ್ದೇನೆ.

ನವೋದಯ ಸಾಹಿತ್ಯದ ಸಂದರ್ಭದಲ್ಲಿ ಮತ್ತು ಆ ಪೂರ್ವದಲ್ಲಿ ಮಕ್ಕಳ ಸಾಹಿತ್ಯ ರಚನೆ ಬಹಳ ಮಹತ್ವ ಪಡೆದುಕೊಂಡಿತು. ಪಂಜೆ ಮಂಗೇಶರಾಯರು, ಕುವೆಂಪು, ಶಿವರಾಮಕಾರಂತರು, ಜಿ.ಪಿ. ರಾಜರತ್ನಂ, ಸಿದ್ಧಯ್ಯ ಪುರಾಣಿಕ ಮುಂತಾದ ಮುಖ್ಯ ಸಾಹಿತಿಗಳು ಮಕ್ಕಳ ಸಾಹಿತ್ಯ ರಚನೆಗೆ ಮಹತ್ವ ಕೊಟ್ಟರು. ಆದರೆ ನವ್ಯ ಸಾಹಿತ್ಯ ದಲ್ಲಿ ಪ್ರಗತಿಶೀಲ ಸಾಹಿತ್ಯದಲ್ಲಿ ಬಂಡಾಯ ಸಾಹಿತ್ಯದಲ್ಲಿ, ಸ್ತ್ರೀವಾದಿ ಸಾಹಿತ್ಯದಲ್ಲಿ ಮಕ್ಕಳ ಸಾಹಿತ್ಯ ರಚನೆ ನಿರ್ಲಕ್ಷ್ಯಕ್ಕೆ ಒಳಗಾಯಿತು. ಇಲ್ಲಿ ಎರಡು ಮುಖ್ಯ ಚರ್ಚೆ ಇದೆ. ಒಂದು ಮಕ್ಕಳ ಸಾಹಿತ್ಯ ರಚನೆಯು ಪ್ರಧಾನವಾಗಿ ಸೃಷ್ಟಿ ಆಗುತ್ತಿಲ್ಲ. ಮಕ್ಕಳ ಸಾಹಿತ್ಯವನ್ನು ಮಕ್ಕಳಿಗೆ ಪಾಠ ಮಾಡುವ ವಿಶೇಷ ಅಧ್ಯಯನ ಕೂಡ ಇಂದಿನ ಅಧ್ಯಾಪಕರಲ್ಲಿ ಕಾಣುತ್ತಿಲ್ಲ. ಕಾರಣ ಅಧ್ಯಾಪಕರಿಗೆ ವಿದ್ಯಾರ್ಥಿಗಳು ಸ್ಪಂದಿಸುತ್ತಿಲ್ಲ. ಪಾಠ ಕೇಳಲು ಮಕ್ಕಳೇ ತರಗತಿಗಳಿಗೆ ಬರದೇ ಇರುವುದು ತುಂಬ ಬೇಸರದ ವಿಷಯವಾಗಿದೆ.

ಇಂತಹ ಸಮಸ್ಯೆ ಮುಂದಿರಿಸಿಕೊಂಡು ಈ ದೇಶದ ಭಾವಿ ಪ್ರಜೆಗಳಾದ ಮಕ್ಕಳಿಗೆ ಸಾಹಿತ್ಯ ರಚನೆ ಮತ್ತು ಕಲಿಸುವಿಕೆಯ ಮಹತ್ವದ ವಿಷಯವನ್ನು ಕುರಿತು ಎಲ್ಲ ಶಿಕ್ಷಣ ತಜ್ಞರು ಮಕ್ಕಳಸಾಹಿತಿಗಳು, ಜನನಾಯಕರು, ಪೋಷಕರು ಕೂಡಿ ಚಿಂತಿಸಬೇಕಾಗಿದೆ. ಮಕ್ಕಳ ಸಾಹಿತ್ಯ ಎಂದ ಕೂಡಲೇ ಕಥೆ, ಕವಿತೆ ಇವು ನಮಗೆ ಕೂಡಲೇ ಕಣ್ಣೆದುರಿಗೆ ಬರುತ್ತವೆ. ಇದುವರೆಗೆ ರಚನೆಯಾಗಿರುವ ಬಹುಪಾಲು ಸಾಹಿತ್ಯವೆಲ್ಲವೂ ಕಥೆಯ ರೂಪದಲ್ಲಿವೆ ಅಥವಾ ಕವಿತೆಯ ರೂಪದಲ್ಲಿವೆ. ಉಳಿದ ಪ್ರಕಾರದ ಸಾಹಿತ್ಯ ಕ್ವಚಿತ್ತಾಗಿ ಕಾಣುತ್ತದೆ. ಮಕ್ಕಳಿಗೆಂದೇ ಅನೇಕ ನಾಟಕಗಳು ರಚನೆ ಗೊಂಡಿದ್ದರೂ ಆ ನಾಟಕಗಳು ಪ್ರಯೋಗವಾಗು ವುದನ್ನು ನೋಡುವ ಅವಕಾಶ ಮಕ್ಕಳಿಗೆ ಒದಗಿಬರುವುದಿಲ್ಲ. ಎಲ್ಲೋ ಒಂದು ಕಡೆ ಕೆಲವು ಪ್ರಯೋಗಗಳು ಕಾಣ ಬಂದರೂ ಅವು ಮಕ್ಕಳಿಗೆ ತಲುಪುವುದಿಲ್ಲವೆಂದೇ ಹೇಳಬೇಕು. ಇನ್ನು ಮಕ್ಕಳ ಕಥೆಗಳು, ಕವಿತೆಗಳಿಗೆ ದಿನಪತ್ರಿಕೆ, ವಾರಪತ್ರಿಕೆಗಳು, ರೇಡಿಯೋ ಕೇಂದ್ರಗಳು ಅವಕಾಶ ಮಾಡಿಕೊಡುತ್ತಿವೆ. ಆದರೆ ಈ ಕತೆಗಳ, ಆಶಯ ನೀತಿಬೋಧಕವಾಗಿ ಇರುತ್ತವೆ. ಇಂತಹ ಕತೆಗಳು ಪರಿಣಾಮಕಾರಿಯಾಗಿ ಮಕ್ಕಳಿಗೆ ಮುಟ್ಟುತ್ತವೆಯೇ ಹೇಳಲು ಬರುವುದಿಲ್ಲ.

ಸಾಹಿತ್ಯ ಎಂದರೇನೆ ಸಮಾಜಕ್ಕೆ ನಿರ್ಲಕ್ಷ್ಯ. ಇನ್ನು ಮಕ್ಕಳ ಸಾಹಿತ್ಯ ಕೇಳುವುದೇ ಬೇಡ. ಅತ್ಯಂತ ನಿರ್ಲ್ಯಕ್ಷ್ಯಕ್ಕೆ ಒಳಗಾಗಿದೆ ಎಂದು ವಿಷಾದದಿಂದಲೇ ಹೇಳಬೇಕು. ಕರ್ನಾಟಕದಲ್ಲಿ ನೂರಕ್ಕೆ ನೂರು ಅಕ್ಷರಸ್ಥರು ಎಂದು ಸಾಧ್ಯ ವಾಗುತ್ತದೆ. ಕನ್ನಡವನ್ನು ಎಲ್ಲ ಕನ್ನಡಿಗರು ಒಂದು ಭಾಷೆ ಯಾಗಿ, ಮಾಧ್ಯಮವಾಗಿ ಓದುವ ಅವಕಾಶ ಬರುತ್ತದೆಯೆ ಎಂದು ಕನಸು ಕಾಣುತ್ತಿದ್ದೇನೆ. ಸಿ.ಬಿ.ಎಸ್.ಇ. ಪಠ್ಯ ಬೋಧನೆ ತರಗತಿಗಳು ಶಿಕ್ಷಣ ಸಂಸ್ಥೆಗಳು ಎಲ್ಲ ಕಡೆ ಸ್ಥಾಪಿತಗೊಳ್ಳುತ್ತಿವೆ. ಇಲ್ಲಿ ಕನ್ನಡಕ್ಕೆ ಅವಕಾಶವೇ ಇಲ್ಲ ಎಂದ ಮೇಲೆ ನಾವು ಯಾರಿಗೆ ಮಕ್ಕಳ ಸಾಹಿತ್ಯ ಕಲಿಸುತ್ತಿದ್ದೇವೆ. ನಮ್ಮ ಮಕ್ಕಳು ಯಾವ ಸಾಹಿತ್ಯ ಕಲಿಯುತ್ತಿದ್ದಾರೆ? ನಾವೆಲ್ಲ ವಿಚಾರ ಮಾಡಬೇಕಿದೆ.

ನಮ್ಮ ಶಾಲಾಕಾಲೇಜಿನಲ್ಲಿ ನಡೆಯುವ ವಾರ್ಷಿ ಕೋತ್ಸವ ಸಮಾರಂಭಗಳನ್ನು ನೋಡಿರಿ. ಟಿ.ವಿ.ಯವರು ಮಕ್ಕಳಿಂದ ನಡೆಸುವ ಕಾರ್ಯಕ್ರಮಗಳನ್ನು ನೋಡಿರಿ. ಕ್ಯಾಸೆಟ್ ಅಥವಾ ಸಿ.ಡಿ. ಗಳನ್ನು ಹಾಕಿ ಸಿನಿಮಾ ಹಾಡುಗಳಿಗೆ ಹೆಜ್ಜೆ ಹಾಕಿಸುತ್ತಾರೆ. ಬಹುತೇಕ ಕಾರ್ಯಕ್ರಮಗಳು ಹಿಂದಿ ಇರುತ್ತವೆ ಇಲ್ಲ ಇಂಗ್ಲೀಷ್ ಇರುತ್ತವೆ. ನಮ್ಮ ಮಕ್ಕಳು ಕಾರ್ಯಕ್ರಮ ನಡೆಸಿದರೆ ನಮ್ಮ ವ್ಯಕ್ತಿತ್ವಕ್ಕೆ ಕುಂದು ಎನ್ನುವ ಮನೋಭಾವ ಮಕ್ಕಳು ಮತ್ತು ಪೋಷಕರಲ್ಲಿ ನಾವು ಕಾಣುತ್ತೇವೆ. ೩೦-೪೦ ವರ್ಷ ಹಿಂದಕ್ಕೆ ಹೋದರೆ ಮಕ್ಕಳು ನಡೆಸುವ ಕಾರ್ಯಕ್ರಮಗಳನ್ನು ದೊಡ್ಡವರೆಲ್ಲ ಬಂದು ಕುಳಿತು ನೋಡಬಹುದಾಗಿತ್ತು. ನಮ್ಮ ಕರ್ನಾಟಕ ಪರಂಪರೆ, ಸಂಸ್ಕೃತಿ, ಚರಿತ್ರೆ ಈ ನಾಡಿನ ಮಾದರಿ ನಾಯಕರು, ಮಹಾತ್ಮರು ಇವರೆಲ್ಲರ ಜೀವನ ಮೌಲ್ಯಗಳನ್ನು ರೂಪಕ ಗಳಾಗಿ ನೃತ್ಯ, ಹಾಡು, ಕಲೆ, ಸಂಗೀತ, ನಾಟಕಗಳಲ್ಲಿ ಏಕಪಾತ್ರಾಭಿನಯಗಳಲ್ಲಿ ಮಕ್ಕಳು ಅಭಿನಯಿಸುತ್ತಿದ್ದರು. ಈಗ ಮಕ್ಕಳು ಅಭಿನಯಿಸುವ ನೃತ್ಯನಾಟಕ, ರೂಪಕಗಳೆಲ್ಲ ಅತ್ಯಂತ ಲೌಕಿಕವೂ, ವಿಷಯಾಧಾರಿತವೂ ಆಗಿವೆ. ಮನಸ್ಸು ಹೃದಯ ಅರಳಿಸುವ, ವ್ಯಕ್ತಿತ್ವ ವಿಕಾಸಗೊಳಿಸುವ ಕಾರ್ಯಕ್ರಮ ಗಳು ಇರುವುದಿಲ್ಲ. ಇದರ ಜೊತೆಗೆ ಮಕ್ಕಳು ಮನೆಪಾಠ





ಬರೆಯುವುದು, ಟಿ.ವಿ. ನೋಡುವುದು ಅಲ್ಲಿನ ಫಾಂಟಂ ಕಥೆಗಳನ್ನು ನೋಡುವುದು ಅವುಗಳನ್ನು ನಿಜವೆಂದು ಭಾವಿಸುವುದು ಇಂತಹ ಅವಾಸ್ತವ, ಅಸಹಜ, ಸಂಸ್ಕೃತಿ ದೂರ ಕಾರ್ಯಕ್ರಮಗಳಿಗೆ ಮಕ್ಕಳನ್ನು ಅಣಿಗೊಳಿಸಲಾಗಿದೆ. ಹೀಗಿರುವಾಗ ಮಕ್ಕಳು ಹಿಂದಿನಂತೆ ಅಜ್ಜ, ಅಜ್ಜಿಯರಿಂದ, ತಾಯಂದಿರಿಂದ, ತಂದೆಯರಿಂದ ಮಕ್ಕಳ ಕಥೆ ಕೇಳು ತ್ತಿದ್ದುದು ಈಗ ಮರೆತೇ ಹೋಗಿದೆ ಎನ್ನಬೇಕು.

ಹಿಂದೆ ತರಗತಿಗಳಲ್ಲಿ ಮಾರಲ್ ಎಜುಕೇಶನ್ ಪಾಠ ಗಳಿದ್ದವು ಮತ್ತು ಮಕ್ಕಳಿಗೆ ಧ್ರುವನ ಕಥೆ, ನಚಿಕೇತನ ಕತೆ, ಮಾರ್ಕಂಡೇಯನ ಕಥೆಗಳೂ ಇವುಗಳಲ್ಲಿ ಇರುತ್ತಿದ್ದವು. ನಮ್ಮ ಮಕ್ಕಳು ಕನ್ನಡ ಮಾಧ್ಯಮದಲ್ಲಿ ಪಾಠ ಕೇಳದೆ ಇರುವುದರಿಂದ ಕನ್ನಡ ಸಾಹಿತ್ಯ, ಕಾವ್ಯ, ಕಥೆಗಳೆಲ್ಲ ಅಪರಿಚಿತವಾಗಿಯೇ ಉಳಿಯುತ್ತವೆ. ಕೇವಲ ಒಂದು ಭಾಷೆ ಯಾಗಿ ಮಕ್ಕಳು ಪಾಠ ಕಲಿಯಲು ಆಸಕ್ತಿ ತೋರುವುದಿಲ್ಲ. ಮಕ್ಕಳು ಮತ್ತು ಪೋಷಕರ ಲಕ್ಷ್ಯವೆಲ್ಲ ಮುಖ್ಯಪಠ್ಯದ ಕಡೆಗೆ ಇರುವುದರಿಂದ ಮಕ್ಕಳ ಸಾಹಿತಿಗಳು, ಕವಿಗಳು, ವಿದ್ವಾಂಸರು ಅವರು ಬರೆದ ಸಾಹಿತ್ಯವೇ ಮಕ್ಕಳ ಗಮನಕ್ಕೆ ಬರದ ಸ್ಥಿತಿಯಲ್ಲಿ ಕನ್ನಡ ಭಾಷೆ ಇದೆ. ಮೆಡಿಕಲ್ ಮತ್ತು ಇಂಜಿನಿಯರಿಂಗ್ ವಿದ್ಯಾರ್ಥಿಗಳು ಒಂದು ವರ್ಷ ಕನ್ನಡ ಭಾಷೆಯನ್ನು ಕಲಿಯುವ ಅವಕಾಶ ರೂಪಿಸಬೇಕು. ಅದರಲ್ಲಿಯೂ ಜೀವನಮೌಲ್ಯಗಳನ್ನು ಕಲಿಸುವ ಮಕ್ಕಳಿ ಗೆಂದೇ ಬರೆದ ಪಂಚತಂತ್ರ, ಹಿತೋಪದೇಶ, ವಚನಸಾಹಿತ್ಯ, ಸರ್ವಜ್ಞನ ಸಾಹಿತ್ಯ, ಸೋಮೇಶ್ವರ ಶತಕ ಇವುಗಳೆಲ್ಲ ಕಲಿಸಬೇಕು. ಇವುಗಳು ಮಕ್ಕಳ ಸಾಹಿತ್ಯವೂ ಹೌದು. ದೊಡ್ಡವರ ಸಾಹಿತ್ಯವೂ ಹೌದು. ಆದಷ್ಟು ನಾವು ಶಾಸ್ತ್ರೀಯ ಭಾಷೆಯಾಗಿ ಕನ್ನಡಕ್ಕೆ ಭಾರತ ಸರ್ಕಾರವು ಮನ್ನಣೆ ನೀಡುವಂತೆ ಒತ್ತಾಯ ಹಾಕಬೇಕಾಗಿದೆ. ನಾವೆಲ್ಲ ಕನ್ನಡ ಅಭಿಮಾನದಲ್ಲಿ ಬಹಳ ಹಿಂದೆ ಬಿದ್ದಿದ್ದೇವೆ. ಕನ್ನಡ ಅಭಿಮಾನ ಎಂದರೆ ಪಠ್ಯವಿಷಯಗಳು, ಅಧ್ಯಯನ, ಆಡಳಿತ, ನ್ಯಾಯಾಂಗ ಇವುಗಳಲ್ಲೆಲ್ಲ ನಾವು ಕನ್ನಡಕ್ಕೆ ಆದ್ಯತೆ ನೀಡ ಬೇಕಾಗಿದೆ. ನೆರೆಯ ತೆಲುಗು, ಮರಾಠಿ, ಮಲೆಯಾಳ, ತಮಿಳು ಭಾಷೆಗಳವರ ಅಭಿಮಾನದ ಜೊತೆಗೆ ನಮ್ಮ ಕನ್ನಡಾ ಭಿಮಾನವನ್ನು ಹೋಲಿಸಿಕೊಂಡರೆ ನಾವು ಬಹಳ ಹಿಂದೆ ಬಿದ್ದಿದ್ದೇವೆ. ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಿಗೆ ಹನ್ನೊಂದು ಲಕ್ಷ ಕಾಣಿಕೆ ನೀಡಿದರೆ ಅದನ್ನೇ ಕುರಿತು ಚರ್ಚೆ ಮಾಡುತ್ತಾರೆ. ಒಬ್ಬ ಇಂಜಿನಿಯರ್, ಡಾಕ್ಟರ್, ಕಂಪ್ಯೂಟರ್ ಇಂಜಿನಿಯರ್ ಗಳು ಲಕ್ಷ ಲಕ್ಷ ತಿಂಗಳಿಗೆ ಸಂಪಾದಿಸಿದರೆ ಇವರಿಗೆ ಏನೂ ಅನ್ನಿಸುವುದಿಲ್ಲ. ಕನ್ನಡಿಗರು, ಸಾಹಿತಿಗಳು, ಇನ್ನೂ ಬೀದಿ ಯಲ್ಲಿ ಬಿದ್ದಿರಬೇಕೇನು? ಜ್ಞಾನಪೀಠ ಪ್ರಶಸ್ತಿಯ ರೀತಿಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರಿಗೆ ಒಂದು ಗೌರವ ನೀಡಿದರೆ ನಾವು ಅದನ್ನು ವಿಮರ್ಶೆಮಾಡುವ ಅಗತ್ಯವಿಲ್ಲ.

ಕನ್ನಡ ಭಾಷೆಗೆ, ಕನ್ನಡ ಸಾಹಿತ್ಯಕ್ಕೆ ಮರ್ಯಾದೆ ಗೌರವ ಸಿಕ್ಕರೆ ಕನ್ನಡಿಗರಿಗೂ ಗೌರವ ಸಿಗುತ್ತದೆ. ನಮ್ಮ ಭಾಷೆಯನ್ನೇ ನಾವು ಮಕ್ಕಳಿಗೆ ಶಿಕ್ಷಣ ಕೊಡಿಸುವಲ್ಲಿ ಅವಜ್ಞೆ ಮಾಡುತ್ತಿದ್ದೇವೆ. ಇದು ಹೋಗಬೇಕು. ಒಂದು ಮಕ್ಕಳ ಸಾಹಿತ್ಯಕೃತಿ ೧೦೦೦ ಪ್ರತಿ ಮುದ್ರಣವಾದರೆ ಅದನ್ನು ಮಾರಾಟ ಮಾಡಲು ಎಷ್ಟು ಕಷ್ಟಪಡಬೇಕು. ಹೀಗಾದರೆ ಮಕ್ಕಳಿಗೆ ಕನ್ನಡ ಸಾಹಿತ್ಯ ಓದುವ ಪ್ರೀತಿ ಎಲ್ಲಿ ಹುಟ್ಟುತ್ತದೆ? ಎಲ್ಲ ಕಡೆ ಇಂಗ್ಲೀಷ್‌ಗೆ ಹಿಂದಿಗೆ ಮರ್ಯಾದೆ ಸಿಗತೊಡಗಿದೆ. ನಾವು ನಮ್ಮ ಮಕ್ಕಳಿಗೆ ಕನ್ನಡ ಕಲಿಸುವುದನ್ನೆ ಬಿಟ್ಟಿದ್ದೇವೆ. ಹೀಗಾದರೆ ಮಕ್ಕಳ ಸಾಹಿತ್ಯ, ಕನ್ನಡ ಸಾಹಿತ್ಯ ಎಲ್ಲವೂ ಚಾಪೆ ಸುತ್ತಿ ಮಡಿಚಿಡಬೇಕಾದ ನೆಲೆಗೆ ಬಂದಿದೆ ಎಂದು ವಿಷಾದದಿಂದ ಹೇಳಬೇಕಾಗಿದೆ. ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನ ನಡೆದರೆ ಜಿಲ್ಲೆಯ ಎಲ್ಲ ಶಾಲೆ, ಕಾಲೇಜು ವಿದ್ಯಾರ್ಥಿಗಳು ಭಾಗವಹಿಸುವಂತಾಗಬೇಕು. ನಮ್ಮ ಮಕ್ಕಳಲ್ಲಿ ಕನ್ನಡ ಪ್ರೀತಿಯನ್ನು ನಾವೆಲ್ಲ ಮೊದಲು ಕಲಿಸಬೇಕಾಗಿದೆ. ಮಕ್ಕಳ ಸಾಹಿತಿಗಳಿಗೆ ನಾವು ಏನು ಗೌರವ ನೀಡಿದ್ದೇವೆ. ಮಕ್ಕಳ ಸಾಹಿತ್ಯ ಸಮ್ಮೇಳನವನ್ನು ಮಕ್ಕಳ ಸಾಹಿತ್ಯ ಅಕಾಡೆಮಿಯನ್ನು ೧೯೮೫, ೮೬ರಲ್ಲಿ ಡಾ|| ಸಿದ್ಧಯ್ಯ ಪುರಾಣಿಕ, ಸಿಸು ಸಂಗಮೇಶ, ಶಂಗು ಬಿರಾದಾರ ಮುಂತಾದವರು ಆಸಕ್ತಿಯಿಂದ ನಡೆಸಿದ್ದರು. ಈಗ ಅಂತಹ ಸಮ್ಮೇಳನವನ್ನು ಮತ್ತೆ ಮುಂದುವರಿಸಬೇಕಾಗಿದೆ. ಮಕ್ಕಳಿಗೆ ಬೇಕಾದ ಪಠ್ಯ ವಿಷಯ ಕನ್ನಡದಲ್ಲಿ ಸಾಕಷ್ಟು ರಚನೆ ಯಾಗಿದ್ದರೂ ಅದಕ್ಕೆ ಸರಿಯಾದ ಮನ್ನಣೆ ಇಲ್ಲ. ಮಕ್ಕಳ ಸಾಹಿತ್ಯ ಎಂದರೆ ಒಂದು ರೀತಿಯ ಉಪೇಕ್ಷೆ ಕೆಲವರಲ್ಲಿ ಇದ್ದಂತೆ ಕಾಣುತ್ತದೆ. ನಾವೆಲ್ಲ ಒಂದು ಕಾಲದಲ್ಲಿ ಮಕ್ಕಳಾಗಿಯೇ ಇದ್ದವರಲ್ಲವೆ? ನಮ್ಮ ಮಕ್ಕಳೇ ಮುಂದೆ ದೇಶ ಆಳುವವರು ಆದುದರಿಂದ ನಮ್ಮ ಮಕ್ಕಳಲ್ಲಿ ಜೀವನ ಮೌಲ್ಯಗಳು ತಮ್ಮ ಕನ್ನಡ ಸಂಸ್ಕೃತಿಯ ಅಭಿಮಾನವನ್ನು ಹೆಮ್ಮೆ ಪಡುವಂತೆ ಬೆಳೆಸಬೇಕಿದೆ.

❖

## ಶ್ರದ್ಧಾಸಕ್ತಿ : ಏಳಿಗೆಗೆ ಮೂಲಾಭಿವ್ಯಕ್ತಿ

–ಡಾ॥ ರಾಜಶೇಖರ ಜಮದಂಡಿ *

ಜೀವನದಲ್ಲಿ ಏನೆಲ್ಲಾ ಸಾಧನೆಯನ್ನು ಮಾಡುವಾಗ ಮುಖ್ಯವಾಗಿ ಬೇಕಾಗಿರುವುದು ಶ್ರದ್ಧಾಸಕ್ತಿ. ಬದುಕಿನ ಹೋರಾಟದಲ್ಲಿ ಶ್ರದ್ಧಾಸಕ್ತಿಗಳು ಇಲ್ಲದಿದ್ದಲ್ಲಿ ಯಾವುದೇ ಗುರಿಯನ್ನು ಮುಟ್ಟಲು ಸಾಧ್ಯವಿಲ್ಲ. ಶ್ರದ್ಧಾಸಕ್ತಿಯೆಂಬ ಗುರಿಯನ್ನೇರಿದಾಗ ಮಾತ್ರ ಜಗತ್ತಿನ ವೈವಿಧ್ಯಮಯವಾದ ಸಾಹಿತ್ಯ–ಸಂಸ್ಕೃತಿ–ಸಂಗೀತಾದಿಗಳ ದಿವ್ಯವಾದ ಸರ್ವದರ್ಶನವಾಗುವುದು. ಶ್ರದ್ಧೆಯು ಮನುಷ್ಯನ ಮನಸ್ಸಿನಲ್ಲಿ ನಿಸರ್ಗವು ಹುದುಗಿಸಿಟ್ಟ ಒಂದು ಅಪೂರ್ವವಾದ ಸಾಧನ. ಹೊಸತನ ಕಂಡಾಗ ಹೊಸ ವಿಷಯ ಅರಿಯುವಾಗ ನೋಡುವುದು, ಆಲಿಸುವುದು, ತಿಳಿಯುವುದು ಇವೆಲ್ಲಾ ಮೊದಲ ಮೆಟ್ಟಿಲಾಗಬೇಕು. ಯಾವುದೇ ಕಾರ್ಯವನ್ನು ಕೈಗೆತ್ತಿಕೊಂಡಾಗ ಭಕ್ತಿ, ಶ್ರದ್ಧೆ, ವ್ಯಾಕುಲತೆಗಳಿಂದ apply ಮಾಡಿದರೆ ಅದರ reply ಅಥವಾ supply ನಮದಾಗುತ್ತದೆ.

ಆಸಕ್ತಿ ಭಾವನೆಯ ಮುಂದುವರಿದ ಶ್ರದ್ಧಾರೂಪವೇ ಭಕ್ತಿ. ಪ್ರಯತ್ನ ಮತ್ತು ಶಕ್ತಿ–ಯುಕ್ತಿಗಳಿದ್ದರಷ್ಟೇ ಸಾಲದು ನಿಜವಾದ ಶ್ರದ್ಧೆಯೂ ಬೇಕೇ ಬೇಕು. ಈ ಕುರಿತು ಕಥೆಯೊಂದು ಹೀಗಿದೆ. ಗುರುಗಳೊಬ್ಬರ ಬಳಿ ಇಬ್ಬರು ವಿದ್ಯಾರ್ಥಿಗಳು ವಿದ್ಯೆ ಕಲಿಯುತ್ತಿರುವ ಸಂದರ್ಭದಲ್ಲಿ ಮೊದಲನೆಯುವನಿಗೆ ಬೇಗ ಬೇಗ ವಿದ್ಯೆಯನ್ನು ಕಲಿಯಬೇಕು, ಉದ್ಯೋಗ ದೊರಕಿಸಿಕೊಳ್ಳಬೇಕು, ಶ್ರೀಮಂತನಾಗಬೇಕು.... ಹೀಗೆ ನೂರಾರು ಯೋಚನೆಗಳ ಕನಸನ್ನು ಕಾಣುತ್ತಾ ಕಲಿಕೆಯೆಂಬುದರಲ್ಲಿ ಪೂರ್ಣ ಶ್ರದ್ಧೆ ನೀಡದೇ ಅನುತ್ತೀರ್ಣನಾದ. ಆದರೆ ಎರಡನೆಯವನು ತಾನೂ ಹಾಗೆ–ಹೀಗೆ ಇರಬೇಕೆಂಬ ಕನಸು ಕಾಣುತ್ತಿದ್ದರೂ ತಾನಿಟ್ಟುಕೊಂಡ ಗುರಿಯನ್ನು ಶ್ರಮದೊಂದಿಗೆ ಶ್ರದ್ಧಾಸಕ್ತಿ ಬೆಳೆಯಿಸಿಕೊಂಡಿದ್ದರಿಂದ ಉತ್ತೀರ್ಣನಾದ ತನ್ನ ಗುರಿ ಮುಟ್ಟಿದ.

ಯಾವಾಗ ಶ್ರದ್ಧೆಯನ್ನು ಬೆಳೆಯಿಸಿಕೊಳ್ಳುತ್ತೇವೆಯೋ ಆವಾಗ ವಿಚಾರಶಕ್ತಿಯೂ ವಿಸ್ತಾರವಾಗುತ್ತದೆ. ಶ್ರದ್ಧಾಗುಣವೆಂಬುದು ಅನ್ವೇಷಣೆಗೆ ಪ್ರೇರಕ. ನಮ್ಮ ಸಜ್ಜನರ ಧರ್ಮವನ್ನು ಸಂಪೂರ್ಣವಾಗಿ ಅನುಸರಿಸಲಾಗದಿದ್ದರೂ ಸ್ವಲ್ಪವಾದರೂ ಶ್ರದ್ಧಾಭಕ್ತಿಗಳಿಂದ ಪಾಲನೆ ಮಾಡಬೇಕು. ಹಾಗೆಯೇ ಇಂದಿನ ವಿದ್ಯಾರ್ಥಿಗಳು ತಮ್ಮ ಓದು–ಬರಹದಲ್ಲಿ ದಿನಾಲು ಸ್ವಲ್ಪ ಸ್ವಲ್ಪ ಶ್ರದ್ಧೆಯನ್ನು ಮನದಾಳದಿಂದ ಅಳವಡಿಸಿಕೊಂಡಿದ್ದೇಯಾದರೆ ಮುಂದೊಂದು ದಿನ ಆ ಶ್ರದ್ಧೆಯೆಂಬುದೇ ನಿಮ್ಮ ಉಸಿರಿನಷ್ಟೇ ಸಹಜವಾಗುತ್ತದೆ. ನಮ್ಮ ಹಿಂದಿನ ಮುನಿಗಳು, ಯೋಗಿಗಳು, ಮಹಾತ್ಮರು ಮುಂತಾದವರೆಲ್ಲ ಶ್ರದ್ಧಾಸಕ್ತಿಯಿಂದ ಯೋಗ ಧ್ಯಾನದ ಮೂಲಕ ಆಧ್ಯಾತ್ಮಿಕ ಚಿಂತನ–ಮಂಥನಕ್ಕೆ ಹೊಸ ಬೆಳಕನ್ನು ನೀಡಿದರು. ಪರಿಣಾಮವಾಗಿ ಇಂದು ಬದುಕಿನ ಹೋರಾಟದಲ್ಲಿರುವ ಮನುಷ್ಯನಿಗೆ ತನ್ನ ನೆಮ್ಮದಿಗಾಗಿ ಆಧ್ಯಾತ್ಮಿಕ ಚಿಂತನೆಯನ್ನು ಮನನ ಮಾಡಿಕೊಂಡು ಮನಸ್ಸನ್ನು ಹಗುರಗೊಳಿಸಿಕೊಳ್ಳಲು ಇಂದಿಗೆ ಅದು ಪರಮ ಸಹಕಾರಿಯಾಗಿದೆ.

ಸತ್ಸಂಗದ ಸಂದರ್ಭದಲ್ಲಿ ಅನುಭವಿಗಳೊಬ್ಬರು ಉಪಯುಕ್ತ ಮಾತುಗಳನ್ನು ಹೇಳುತ್ತಿದ್ದಾಗ ನಾವು ಸಹ ಶ್ರದ್ಧೆಯಿಂದ ಕೇಳಿಸಿಕೊಳ್ಳುವ ತಾಳ್ಮೆ ಇರಬೇಕು. ಅದೇ ರೀತಿ ಇನ್ನೊಬ್ಬರಿಗೆ ಉಪದೇಶಿಸುವಾಗಲೂ ಆಯಾ ವಿಷಯದ ಪರಿಜ್ಞಾನದೊಂದಿಗೆ ಶ್ರದ್ಧೆಯೊಳಿರಬೇಕು. ಅಂದರೆ ಯಾರು, ಯಾವಾಗ, ಎಲ್ಲಿ ಹೇಗೆ ಕೆಲಸವನ್ನು ನಿರ್ವಹಿಸುತ್ತಾರೋ ಆಯಾಯ ಸಮಯದಲ್ಲೆಲ್ಲಾ ಶ್ರದ್ಧೆಯಲ್ಲಿರಬೇಕಷ್ಟೆ. ಇಲ್ಲದೇ ಇದ್ದರೆ ಕೆಸರಿನಲ್ಲಿ ಕಂಬವನ್ನು ನಿಲ್ಲಿಸಿದಂತೆ, ಸಮುದ್ರದ ಅಲೆಗಳನ್ನು ಅನಾವಶ್ಯಕವಾಗಿ ಎಣಿಸಿದಂತೆ, ಉದುರುವ ಮರದ ಎಲೆಗಳನ್ನು ಎಣಿಕೆ ಹಾಕಿದಂತೆ.... ವೃಥಾ ಅನಾವಶ್ಯಕ!

* ಅಧ್ಯಾಪಕರು, ಜೆ.ಎಸ್.ಎಸ್. ಕನ್ನಡ ಸ್ನಾತಕೋತ್ತರ ಕೇಂದ್ರ, ಚಾಮರಾಜನಗರ –೫೭೧ ೩೧೩.





**ಶ್ರದ್ಧೆಯಿರುವುದೇ ನಾಶ ಅಶ್ರದ್ಧೆಯೆ ನರಕ**
**ಶ್ರದ್ಧೆಯಿದ್ದರೆ ಕೋಟಿದೇವರು ಎಮಗೆ ಆಳಯ್ಯ**

ಎಂದು ಕುವೆಂಪು ಹೇಳಿದಂತೆ, ಶ್ರದ್ಧೆಯು ಮಾನವನ ಜೀವನದುದ್ದಕ್ಕೂ ಬೇಕು. ಇದು ಬಾಳಿನ ಉಸಿರು, ಜೀವಾಳ ಹಾಗೂ ಸಾಧನಾ ಶಕ್ತಿ. ಬುದ್ಧನ ಶ್ರದ್ಧೆಯು ಮನುಷ್ಯನ ಸತ್ಯ ಕಂಡುಕೊಳ್ಳುವ ತಪಸ್ಸಿನಲಿ ಬಸವಣ್ಣನವರ ಶ್ರದ್ಧೆಯು ಸಮಾಜ ಸುಧಾರಣೆಯಲ್ಲಿ, ಗಾಂಧೀಜಿಯ ಶ್ರದ್ಧೆಯು ಸ್ವಾತಂತ್ರ್ಯಾಂದೋಲನದಲ್ಲಿ, ಮದರ್ ಥೆರೆಸ್ಸಾರ ಶ್ರದ್ಧೆ ಕುಷ್ಟ ರೋಗಿಗಳ ಉಪಚಾರದಲ್ಲಿ ಹಾಗೆಯೇ ಸಿದ್ಧಗಂಗಾ ಶ್ರೀಗಳ ಶ್ರದ್ಧೆ ಸಾವಿರಾರು ಬಡ ಮಕ್ಕಳ ಲಾಲನೆ–ಪಾಲನೆಯಲ್ಲಿ.

ನಮ್ಮ ದೇಶದಲ್ಲಿ ಇಂದು ಅತ್ಯಂತ ಕೊರತೆಯಿರುವುದು ಶ್ರದ್ಧೆ ಮತ್ತು ಶಿಸ್ತಿಗೆ ಇದರಿಂದ ಯಾವ ಕೆಲಸ ಕಾರ್ಯಗಳು ನಿಯುವಮಾನಸಾರವಾಗಿ ಆಗುತ್ತಿಲ್ಲ. ಮನೆಗಳಲ್ಲಿ, ಕಛೇರಿಗಳಲ್ಲಿ, ಶಾಲಾ–ಕಾಲೇಜುಗಳಲ್ಲಿ, ಸಮಾರಂಭಗಳಲ್ಲಿ ಹೀಗೆ ಎಲ್ಲೆಲ್ಲೂ ಅಶ್ರದ್ಧೆಯೇ ತಾಂಡವವಾಡುತ್ತಿದೆ. ಶ್ರದ್ಧೆಯಿಂದಲೇ ಆರಂಭಿಸಿದಾಗ್ಯೂ ಮುಗಿಸುವ ಹೊತ್ತಿಗೆ ಅದೇ ಶ್ರದ್ಧೆಯೆಂಬುದು ಎಲ್ಲರಲ್ಲೂ ಮರತೇ ಹೋಗಿರುತ್ತದೆ. ಎರಡನೇ ಮಹಾಯುದ್ಧದ ಸಂದರ್ಭದಲ್ಲಿ ಅತಿ ಹೆಚ್ಚಿನ ಹಾನಿಗೀಡಾಗಿದ್ದು ಜರ್ಮನಿ ಮತ್ತು ಜಪಾನ್ ಚಿಕ್ಕ ರಾಷ್ಟ್ರಗಳು ಇಂದು ಆರ್ಥಿಕವಾಗಿ, ತಾಂತ್ರಿಕವಾಗಿ ವಿಶ್ವದಲ್ಲಿಯೇ ಉನ್ನತ ಸ್ಥಾನ ಗಳಿಸಲು ಕಾರಣ ಆ ರಾಷ್ಟ್ರದ ಜನರಲ್ಲಿರುವ ಕಾಯಕ ಶ್ರದ್ಧೆ ಮತ್ತು ಶಿಸ್ತು. ಅದೇ ರೀತಿ ನಾವೂ ಸಹ ಪ್ರತಿಯೊಂದು ಅಭಿವೃದ್ಧಿ ಕೆಲಸ–ಕಾರ್ಯಗಳಲ್ಲಿ ಇನ್ನಾದರೂ ಶ್ರದ್ಧಾಸಕ್ತಿ ಮತ್ತು ಶಿಸ್ತನ್ನು ಬೆಳೆಸಿಕೊಳ್ಳೋಣ ಆ ಮೂಲಕ ಇತರರಿಗೆ ಮಾದರಿಯಾಗೋಣ.

❖

## ಜೀವನದ ಉನ್ನತಿ

ಒಳ್ಳೆಯದನ್ನು ಮಾಡುವ ಗುಣದಿಂದ ನಮ್ಮ ಜೀವನದ ಹರಹು ವಿಸ್ತಾರಗೊಳ್ಳುವುದು.

ಕಷ್ಟದೆಶೆಯಲ್ಲಿರುವವರಿಗೆ ಕೊಡುವ ಒಂದು ಉತ್ತೇಜಕ ಮಾತಿನಿಂದ ಜೀವನದ ಉನ್ನತಿ ವ್ಯಕ್ತವಾಗುವುದು.

ಮನುಷ್ಯನು ಪ್ರತಿದಿನವೂ ಮಾಡುವಂಥ ಈ ಅಲ್ಪ ಕಾರ್ಯಗಳಿಂದಲೇ ಆತನ ವ್ಯಕ್ತಿತ್ವಕ್ಕೆ ರೂಪವೂ, ಪರಿಮಳವೂ ಉಂಟಾಗುವುದು. ಅಗತ್ಯವಿರುವವರಿಗೆ ನಾವು ನೀಡುವ ಅಲ್ಪ ಸಹಾಯವು ವ್ಯರ್ಥ ಹೋಗುವುದಿಲ್ಲ. ಅದು ಕೊನೆಗೆ ಚಕ್ರಬಡ್ಡಿಯ ರೂಪದಲ್ಲಿ ನಮ್ಮೆಡೆಗೆ ಹಿಂದಿರುಗಿ ಬರುವುದು.

ಸಹಾಯ ನೀಡುವಂಥ ಅವಕಾಶಗಳು ನಮಗೆ ಎಲ್ಲೆಡೆಯಲ್ಲಿಯೂ ಎದುರಾಗುವುವು. ಸಹಾನುಭೂತಿಯ ನುಡಿಯನ್ನು ಅಪೇಕ್ಷಿಸುವ ಹೃದಯವೊಂದು ನಮ್ಮೆದುರಿನಲ್ಲಿ ಸದಾಕಾಲವೂ ಇದ್ದೇ ಇರುತ್ತದೆ. ಕರೆದುಕೊಳ್ಳ ಬೇಕೆಂದು ಕೈಚಾಚುವ ಜನ ಈ ಜಗತ್ತಿನಲ್ಲಿ ತುಂಬಿದ್ದಾರೆ. ಅಪರಿಚಿತ ಮನುಷ್ಯನಿಂದ ಬರುವ ಮುಗುಳು ನಗೆಯು ಇನ್ನೊಬ್ಬನ ಹೃದಯದಲ್ಲಿ ನಗೆಮುಗುಳನ್ನು ಅರಳಿಸಬಲ್ಲದು. ಕರುಣೆಯ ನೋಟದಿಂದ ದಗ್ಧ ಹೃದಯವು ಧೈರ್ಯ ತಂದುಕೊಳ್ಳುವುದು. ಗೆಲುವಿನ ಮಾತಿನಿಂದ ಅಸಂಖ್ಯಾತ ಹೃದಯಗಳು ತಮ್ಮ ಜೀವನದ ದಾರಿಯನ್ನು ಗುರುತಿಸಿಕೊಂಡಿದೆ.

ನೀನು ಹೋಗುತ್ತಿದ್ದಂತೆ ನಿನ್ನ ಬಳಿಯಿರುವ ಹೂಗಳನ್ನು ಚೆಲ್ಲು, ಅದೇ ಹಾದಿಯಿಂದ ನೀನು ಇನ್ನೊಮ್ಮೆ ಹೋಗಲಿಕ್ಕಿಲ್ಲ.

–'ಶಾಂತಿಯ ವೇದಿಕೆ'ಯಿಂದ

# ವಚನದಲ್ಲಿ ವಿಜ್ಞಾನದ ಕಲಿಕೆ ಮತ್ತು ದ್ಯುತಿ ಸಂಶ್ಲೇಷಣೆ ಕ್ರಿಯೆ

-ಪೂಜ್ಯಶ್ರೀ ಯೋಗಿನಿ ಪ್ರಭುಶ್ರೀ ತಾಯಿ *

ಮಾನವನ ಬುದ್ಧಿವಂತಿಕೆಯ ಜಾಣ್ಮೆಯನ್ನು ಮೀರಿದ ವಿಚಾರಗಳನ್ನು ನಿರೂಪಿಸುವುದು ಆಧ್ಯಾತ್ಮ. ಮಾನವನ ದೇಹಾತೀತ ಅನುಭವಗಳು ಅಥವಾ ಮಾನವನ ಅತೀಂದ್ರಿಯ ಅನುಭವಗಳೇ ಆಧ್ಯಾತ್ಮ. ಸಾಮಾನ್ಯ ವಿಜ್ಞಾನವನ್ನು ಮೀರಿದ ಜ್ಞಾನವೇ ಆಧ್ಯಾತ್ಮಿಕ ವಿಜ್ಞಾನ. ಪೃಥ್ವಿಯಲ್ಲಿ ಜೀವಿ ಹುಟ್ಟುವುದರಿಂದ ಬದುಕಿನ ಕೊನೆಯವರೆಗೂ ವೈಜ್ಞಾನಿಕತೆ ಹಾಸು ಹೊಕ್ಕಾಗಿದೆ.

ಇಂದು ನಾವು ಜೀವಿಸಿರುವ ಕಾಲ ವೈಜ್ಞಾನಿಕ ಯುಗ. ಪ್ರತಿ ಹೆಜ್ಜೆಗೂ ಪ್ರಶ್ನೆಗಳ ಸುರಿಮಳೆ. ಇಂದಿನ ಯುವಕ-ಯುವತಿಯರು, ವಿದ್ಯಾವಂತನು ನೇರವಾಗಿ ಪ್ರಶ್ನಿಸುವ ಧೈರ್ಯವಂತರಾಗಿದ್ದಾರೆ. ಹೀಗಾಗಿ ವಚನಗಳಲ್ಲಿ ವೈಜ್ಞಾನಿಕತೆಯ ಅಧ್ಯಯನ ಅವಶ್ಯವಾಗಿದೆ. ಈ ಕ್ಷೇತ್ರದಲ್ಲಿ ನಮ್ಮ ಜವಾಬ್ದಾರಿ ಹೆಚ್ಚಾಗಬೇಕು. ಶರಣರು ವೈಜ್ಞಾನಿಕ ವಿಚಾರ ಕುರಿತು ವಚನಗಳು ಬರೆದಿರುವುದು ಒಂದು ತಪಸ್ಸು. ಅದರಲ್ಲಿಯೇ ಸಂಪೂರ್ಣವಾಗಿ ತನ್ಮಯತೆ ಇರಬೇಕು. ವಚನಗಳನ್ನು ನೋಡಿದಾಗ ಪ್ರಗತಿಶೀಲ ಚಿಂತನೆಗಳು, ವೈಜ್ಞಾನಿಕ, ವೈಚಾರಿಕ ಮನೋಭಾವ ಮೂಡುತ್ತದೆ.

ಬಸವಾದಿ ಪ್ರಮಥರಲ್ಲಿ ಮಾನವ ಜಾತಿ ಒಂದೇ ಎಂಬಂತೆ, ವಿಜ್ಞಾನದಲ್ಲಿಯೂ ಒಂದೇ ಜಾತಿ, ಬ್ರಿಟಿಷರ ಆಳ್ವಿಕೆಯಲ್ಲಿದ್ದಾಗ ಬೆಂಗಳೂರಿನ ಕೆಲವು ರೆಸ್ಟೋರೆಂಟ್‌ಗಳಲ್ಲಿ 'ಡಾಗ್ಸ್ ಅಂಡ್ ಇಂಡಿಯನ್ಸ್ ನಾಟ್ ಅ ಲೋಡ್' ಎಂಬ ಬೋರ್ಡ್ ಹಾಕಿರುತ್ತಿತ್ತು. ಆದರೆ ಶರಣರು ಮಹಾನುಭಾವಿಗಳ 'ಅನುಭವಮಂಟಪ'ವೆಂಬ ಪ್ರಥಮ ಪಾರ್ಲಿಮೆಂಟ್ (ಯುಎನ್‌ಓ)ದಲ್ಲಿ ಎಲ್ಲರೂ ಒಂದೇ ಮತ್ತು ಒಂದೇ ಜಾತಿ ಎಂದು ಮುದ್ರೆ ಒತ್ತಿದೆ. ಇನ್ನು ಕೆಲವರು ಪ್ಯೂರ್ ಅಂಡ್ ಅಪ್ಲೈಡ್ ಅಂತ ಹೇಳುತ್ತಾರೆ. ಆದರೆ ನೊಬೆಲ್ ಪ್ರಶಸ್ತಿ ಪಡೆದ ವಿಜ್ಞಾನಿಯೊಬ್ಬರು ಹೀಗೆ ಹೇಳುತ್ತಾರೆ 'Science that has been applied that is yet to be applied' ಎಲ್ಲ ಅನ್ವಯಿಕ ವಿಜ್ಞಾನಕ್ಕೂ ಮೂಲ ವಿಜ್ಞಾನ ಬೇಕೇ ಬೇಕು.

ವಚನಗಳಲ್ಲಿ ಮೂಲವಿಜ್ಞಾನ ಎದ್ದು ಕಾಣುತ್ತದೆ. ಇಲ್ಲಿಯವರೆಗೂ ನಾವು ನೋಡಿದ ವಿಜ್ಞಾನದ ಬಗ್ಗೆ ವಿಕಾಸವಾಗಿರುವುದು ಸುಮಾರು ೧೫ನೇ ಶತಮಾನದ್ದು. ಆದರೆ ೧೨ನೆಯ ಶತಮಾನದಲ್ಲಿ ಬಾಳಿದ ಶರಣರು ಅವರೆಲ್ಲರಿಗಿಂತ ಹೆಚ್ಚಿನ ಜ್ಞಾನವನ್ನು ಹೊಂದಿರುವುದು. ಅವರ ವಚನಗಳನ್ನು ನೋಡಿದಾಗ ನಮಗೆ ಅರಿವಾಗುತ್ತದೆ. ಹೀಗಾಗಿ ವಚನಗಳಲ್ಲಿ ವಿಜ್ಞಾನ ಇದೊಂದು ಮಿತಿಯಿಲ್ಲದ ಏಣಿ. ಈ ಏಣಿ ನಾವು ಏರುತ್ತಲೇ ಹೋಗಬೇಕು. ಇದರಲ್ಲಿ ನಾವು ಉನ್ನತಿ ಸಾಧಿಸಬೇಕಾಗಿದೆ. ಕಾರಣ ವಚನದಲ್ಲಿ ವಿಜ್ಞಾನದ ಕಲಿಕೆ, ವೈಜ್ಞಾನಿಕ ಚಿಂತನೆ, ಸಂಶೋಧನೆಗಳು ಹುದುಗಿವೆ. ಇದರಿಂದ ನಮ್ಮಲ್ಲಿಯ ಮೌಢ್ಯತೆ ನಿವಾರಣೆಯ ಅಂಶ ಅಡಗಿದೆ. 'ಸಬ್ ಲೋಕೋಂಕಾ ಏಕ ಹಿ ದವಾ' ಎಂಬಂತೆ ಎಲ್ಲಿ ವಚನ ವಿಜ್ಞಾನದ ಕಲಿಕೆ ಹೆಚ್ಚಾಗುತ್ತದೆಯೋ ಅಲ್ಲಿ ಆಡಂಬರ, ಭಯ, ಮೌಢ್ಯತೆ ಇರುವುದಿಲ್ಲ. ಉದಾಹರಣೆಗೆ ಕೆಲವರು ಇನ್ನೊಬ್ಬರ ಭವಿಷ್ಯ ಹೇಳುತ್ತಾರೆ. ಅವರ ಭವಿಷ್ಯವೇ ಅವರಿಗೆ ಗೊತ್ತಿರುವುದಿಲ್ಲ. ಗಿಳಿಯಿಂದ ಭವಿಷ್ಯ ಕೇಳುವುದು, ಇವೆಲ್ಲ ಹಾಸ್ಯಕರವಲ್ಲವೆ? ಇಂಥ ಅಜ್ಞಾನಕ್ಕೆ ಅಮೂಲ್ಯವಾದ ಸಮಯವನ್ನು ವ್ಯರ್ಥಗೊಳಿಸದೆ ಮೌಢ್ಯಗಳಿಗೆ ಬಲಿಯಾಗದೆ ಬದುಕು ರೂಪಿಸುತ್ತದೆ.

ವಚನ ವಿಜ್ಞಾನದ ಸಂಶೋಧನೆಯೆಂದರೆ ಪರಿಶ್ರಮದ ಕಾರ್ಯ. ಇಲ್ಲಿ ಬುದ್ಧಿವಂತಿಕೆ ಬೇಕು ಮತ್ತು ಪರಿಶ್ರಮವಿಲ್ಲದೆ ಏನನ್ನೂ ಸಾಧಿಸಲು ಸಾಧ್ಯವಿಲ್ಲ. ಉದಾಹರಣೆಗೆ ಹೇಳಬೇಕೆಂದರೆ 'ಮರಗಿಡಗಳು ಸೂರ್ಯನ ಬೆಳಕಿನಿಂದ ದ್ಯುತಿ ಸಂಶ್ಲೇಷಣೆಯ ಕಾರ್ಯ ನಡೆಸಿ ತಮ್ಮ ಆಹಾರ ಹೇಗೆ

* ಅಧ್ಯಾಪಕರು, ಜೆ.ಎಸ್.ಎಸ್. ಕನ್ನಡ ಸ್ನಾತಕೋತ್ತರ ಕೇಂದ್ರ, ಚಾಮರಾಜನಗರ -೫೭೧ ೩೧೩.





ತಯಾರಿಸಿಕೊಳ್ಳುತ್ತವೆಯೋ ಹಾಗೆಯೇ 'ಅಕ್ಕಮಹಾದೇವಿ' ಮತ್ತು 'ಬಸವಣ್ಣ'ನವರ ಇವರಿಬ್ಬರ ವಚನದಲ್ಲಿ ಈ ದ್ಯುತಿ ಸಂಶ್ಲೇಷಣೆಯ ಕ್ರಿಯೆ ಹುದುಗಿದೆ.

'ಲೋಕದ ಚೇಷ್ಟೆಗೆ ರವಿ ಬೀಜವಾದಂತೆ' (ಅಕ್ಕಮಹಾದೇವಿ ವಚನ) ಸೂರ್ಯನ ಉದಯ ತಾವರೆಗೆ ಜೀವಾಳ' (ಬಸವಣ್ಣನವರ ವಚನ) ಈ ಸಾಲುಗಳಲ್ಲಿ ಖಗೋಳ ಶಾಸ್ತ್ರದ ಸಾರವೇ ಅಡಗಿದೆ. ಈ ಪ್ರಪಂಚದ ಎಲ್ಲ ವ್ಯಾಪಾರಗಳು ನಿಂತುಹೋಗುವುವು. ಸೂರ್ಯನ ಉದಯದಿಂದ ತಾವರೆ(ಕಮಲ) ಪುಷ್ಪಕ್ಕೆ ಪ್ರಾಣಚೇತನ ಬರುತ್ತದೆ. ಅಂದರೆ ಸೂರ್ಯನ ಬೆಳಕಿಗೆ ಅರಳುವಂಥವು. ಇಲ್ಲಿ ವೈಜ್ಞಾನಿಕತೆ ಕಂಡು ಬರುತ್ತದೆ. ಜೀವಿ ಹುಟ್ಟುವುದರಿಂದ ಬದುಕಿನ ಕೊನೆಯವರೆಗೂ 'ರಸಾಯನಶಾಸ್ತ್ರ' (Chemistry) ಎಲ್ಲ ಹಾಸುಹೊಕ್ಕಾಗಿದೆ.

ಸ್ವತಂತ್ರ ಸಿದ್ಧಲಿಂಗೇಶ್ವರರು 'ಸೂರ್ಯೋದಯವಾಗೆ ತಿಮಿರ ಉಂಟೆ ಹೇಳಾ? ಎಂದು ಪ್ರಶ್ನಿಸುತ್ತಾರೆ. ಇದರ ಅರ್ಥ ಸೂರ್ಯನ ಉದಯವಾದ ಮೇಲೆ ತಿಮಿರ ಎಂದರೆ ಕತ್ತಲೆ, ಅಜ್ಞಾನ ಎಂದರ್ಥ) ಕತ್ತಲೆ ಇರಲಿಕ್ಕೆ ಸಾಧ್ಯವಿಲ್ಲ. ಉದಾಹರಣೆಗೆ 'ಬಸವನೆಂಬ ಸೂರ್ಯನಿಗೆ ಅಜ್ಞಾನದ ಕೆಲವು ಮೋಡಗಳು ಅಡ್ಡಗಟ್ಟುತ್ತವೆ. ಆದರೆ ಕೆಲ ಸಮಯ ಸರಿದ ಮೇಲೆ ಅದಾಗಿಯೆ ದೂರ ಸರಿಯುತ್ತವೆ. ಆಗ ಬಸವನೆಂಬ ಸೂರ್ಯನಿಂದಲೇ ಜಗಕ್ಕೆ ಬೇಕು ಬೆಳಕು ಎಂಬ ನಿಜಾಂಶ ಮರೆಯಬಾರದು. ಹಾಗೆಯೇ 'ವಚನಗಳೆಂಬ ಜ್ಯೋತಿ ಹಿಡಿದುಕೊಂಡು ವೈಜ್ಞಾನಿಕತೆಗೆ ಒರೆಗಟ್ಟಿ ನೋಡಿದಾಗ ಶರಣರು ಮೂಲ ವಿಜ್ಞಾನಿಗಳು ಆಗಿದ್ದರು ಎಂಬುದು ಅವರ ಮಹಾಜ್ಞಾನದಿಂದ ತಿಳಿದು ಬರುತ್ತದೆ.

ಸೂರ್ಯಶಕ್ತಿ ಜಗತ್ತಿನ ಎಲ್ಲ ಶಕ್ತಿಯ ಮೂಲವೆಂದು ವಿಜ್ಞಾನ ಹೇಳುತ್ತದೆ. 'Solar energy is the source of all energies in the world' ಲೋಕದಲ್ಲಿ ನಡೆಯುವ ಪ್ರತಿಯೊಂದು ಕ್ರಿಯೆಗೆ ಬೆಳಕೇ ಮೂಲಶಕ್ತಿ. ಸೂರ್ಯೋದಯದಿಂದ ಕಮಲಪುಷ್ಪ(ತಾವರೆ)ಕ್ಕೆ ಪ್ರಾಣಚೇತನ ಬಂದಂತೆ, ಸೃಷ್ಟಿಯ ಮೂಲ ಮತ್ತು ಪ್ರಾಣಚೇತನ ವಾದಸೂರ್ಯನು ಎಂದು ಈ ವಚನಗಳ ಸಾಲಿನಲ್ಲಿ ವೈಜ್ಞಾನಿಕ ಅಂಶ ತಿಳಿದು ಬರುತ್ತದೆ.

ಸೃಷ್ಟಿಯು ಬೆಳೆದು ಬರುತ್ತಿರುವಂತೆ ಅಲ್ಲಿಯ ಎಲ್ಲ ನೆಲೆಗಳು ಸೂರ್ಯನಿಂದ ಸಂಸ್ಕಾರವನ್ನು ಪಡೆದಿರುತ್ತವೆ. ಪ್ರಕೃತಿಯಲ್ಲಿಯ ಸೃಷ್ಟಿಕಾರ್ಯವು ಪಂಚಭೂತಗಳ ಸಂಯೋಗದಿಂದಲೇ ನಡೆಯುವುದು ಇದು ವೈಜ್ಞಾನಿಕ ಸತ್ಯ. ನಾವು ಬಳಸುತ್ತಿರುವ ವಿದ್ಯುತ್, ಪೆಟ್ರೋಲ್, ಡೀಸಲ್, ಎಣ್ಣೆ, ಉರಿಯುವ ಕಟ್ಟಿಗೆ, ಇದ್ದಿಲು, ಕಲ್ಲಿದ್ದಲುಗಳು ಸೌರ ಶಕ್ತಿಯ ಹಲವು ರೂಪಾಂತರಗಳು. ನಾನು ಬರೆಯುವುದು, ನೀವು ಓದುವುದು ಕೂಡ ಸೂರ್ಯಶಕ್ತಿಯ ಬಳಕೆಯಿಂದಲೇ ರವಿ ಉದಯದಿಂದ ಸಕಲ ಜಲಚರ ಜೀವಿಗಳ ಕ್ರಿಯೆಗಳು ಪ್ರಾರಂಭವಾಗುತ್ತವೆ. ಪಕ್ಷಿಗಳ ಇಂಚರ ಧ್ವನಿ ಹೊರಸೂಸುತ್ತದೆ. ಬೀಜ ಮೊಳಕೆಯೊಡೆಯುತ್ತವೆ. ಹಸಿರೆಲೆಗಳು ತಮ್ಮ ಆಹಾರ ತಾವೆ(ಸ್ವಯಂ) ತಯಾರಿಸಿಕೊಳ್ಳುತ್ತವೆ. ಉದಯದ ಮಾಗಿಯ ಬಿಸಿಲು ಅಂಗಕ್ಕೆ ಹಿತವಾಯಿತು' ಎಂಬ ಅಕ್ಕನ ವಚನದಂತೆ ವಿಟಮಿನ್ 'ಡಿ' ಅಂಗ ದೊರೆಯುತ್ತದೆ. ಈ ಎಳೆ ಬಿಸಿಲಿನಲ್ಲಿ 'ಅಲ್ಟ್ರಾವಾಯೊಲೆಟ್' ಕಿರಣಗಳು ಇರುತ್ತವೆ. ಇವು ತ್ವಚೆಯ ಮೇಲೆ ಪ್ರಭಾವ ಬೀರುತ್ತವೆ. ಮತ್ತು ವಿಟಮಿನ್ 'ಡಿ' ತಯಾರಾಗುವಂತೆ ಮಾಡುತ್ತದೆ. ಇದರಿಂದ ಕೂಸುಗಳ ಎಲುಬು ಸರಿಯಾಗಿ ಬೆಳೆಯುತ್ತವೆ. ಒಂದು ವೇಳೆ ಮಾಗಿಯ ಬಿಸಿಲು ಮೈಮೇಲೆ ಬೀಳದೆ ಹೋದರೆ ದೇಹದಲ್ಲಿ ವಿಟಮಿನ್ 'ಡಿ' ತಯಾರಾಗುವುದಿಲ್ಲ. ವಿಟಮಿನ್ 'ಡಿ' ಕೊರತೆ ಮಕ್ಕಳಲ್ಲಿ ಕಾಣುವುದು. ಈ ತೊಂದರೆಯನ್ನು 'ರಿಕೆಟ್ಸ್' ರೋಗವೆಂದು ಕರೆಯುತ್ತೇವೆ. 'ಮುಂಜನೆಯ ಮಾಗಿ ಬಿಸಿಲಿನಿಂದ ಆರೋಗ್ಯಕ್ಕೆ ಒಳ್ಳೆಯದು ಎಂಬ ಸಂಗತಿ(ಶರಣರಿಗೆ ಅರಿವು ಇತ್ತು ಎನ್ನುವ) ವೈಜ್ಞಾನಿಕ ವಿಷಯ ಮೆಚ್ಚಬೇಕಾದದ್ದು. ಇಲ್ಲಿ ಸೃಷ್ಟಿ ಕ್ರಿಯೆಯ ವಿಕಾಸವಾದವು ಧ್ವನಿತವಾಗುತ್ತದೆ.

ಶರಣರು ದೇಹವೇ ದೇಗುಲವನ್ನಾಗಿ ಮಾಡಿದ ವೈಜ್ಞಾನಿಕ ಪ್ರಯೋಗಾಲಯ.

ಉಳ್ಳವರು ಶಿವಾಲಯವ..... ಎನ್ನ ಕಾಲೆ ಕಂಬ, ದೇಹವೇ ದೇಗುಲ.....

ಉರಿಲಿಂಗಪೆದ್ದಿ ಶರಣರ ವಚನ 'ದೇಹವೆಂಬ ಮನೆಯಲ್ಲಿ ಮಹಾಲಿಂಗವೆಂಬರಸು......

ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರನು ಸದಾ ಸನ್ನಿಹಿತನು.

ಅಕಾಶ, ವಾಯು, ಅಗ್ನಿ, ಅಪ್ಪು, ಪೃಥ್ವಿ, ಈ ಪಂಚ ಭೂತಗಳು ಓಂಕಾರ ಸ್ವರೂಪಿಯಾದ ಮಹಾಲಿಂಗದಿಂದ ಹೊರಹೊಮ್ಮಿರುವುದರಿಂದ, ಸೃಷ್ಟಿ ರಚನೆ ರೂಪುಗೊಳ್ಳಲು ಮಹಾಲಿಂಗವೇ ಆದಿಸ್ಥಲವೆನಿಸುತ್ತದೆ. ಮಹಾವೃಕ್ಷದಿಂದ ಹೊರಹೊಮ್ಮಿದ ಬೀಜವು ಮಹಾವೃಕ್ಷವನ್ನೇ ತನ್ನಲ್ಲಿ ಗರ್ಭೀಕರಿಸಿಕೊಂಡಿರುವಂತೆ, ಮಹಾಲಿಂಗದಿಂದ ಹೊರ ಹೊಮ್ಮಿದ ಸೃಷ್ಟಿಯು ವಿಶ್ವಾತ್ಮ ಚೇತನವಾದ ಮಹಾಲಿಂಗ ವನ್ನು ತನ್ನಲ್ಲಿ ಗರ್ಭೀಕರಿಸಿಕೊಂಡಿತ್ತದೆಂದು ಶರಣರ ಸಂದೇಶ.

ಮಾನವನ ತನ್ನ ಮನ ಭಾವ ಕರಣೇಂದ್ರಿಯ ಸಹಿತ ಆ ಪರಶಿವ ಸ್ವರೂಪವೇ ಆಗಬೇಕಾಗಿದೆ. ಆಗಲೇ ಮಾನವನ ಸರ್ವಾಂಗವೂ ಲಿಂಗಾಂಗ ಪರಶಿವಾಂಗ ವಾಗುವುದು. ಶಿವಾಂಗದಲ್ಲಿ ನೆಲೆಸಿ ಶಿವಾನಂದನನುಭವಿಸುವವನು ಶಿವನಲ್ಲದೆ ಬೇರಿಲ್ಲವೆಂಬುದು ಮಹದನುಭಾವ ನೆಲೆಗೊಳ್ಳುತ್ತದೆ. ಇದು ನವ್ಯ ದಿವ್ಯವಾದ ಪರಿಪೂರ್ಣವಾದ ಸಾರ್ಥಕ ಬದುಕಿನ ರಹಸ್ಯ. ಇಲ್ಲಿ ದೇಹವೇ ಪ್ರಯೋಗಾಲ ಯವನ್ನಾಗಿ ಮಾಡಿಕೊಂಡು ಸಾಧಿಸಿ ತೋರಿಸಿರುವುದು ಇದೇ ವಿಜ್ಞಾನ. ಹೀಗಾಗಿ ಶರಣರು ಮಹಾಜ್ಞಾನಿಗಳು ಅಲ್ಲದೆ ಅವರ ವಚನಗಳಲ್ಲಿ ವೈಜ್ಞಾನಿಕ, ವೈಚಾರಿಕ ಚಿಂತನೆಯಿಂದ ಕೂಡಿವೆ.

❖

## ಸಮಸ್ಯೆಗಳಿಂದ ಪಲಾಯನವೇ ?

ಸಮಸ್ಯೆ ಎನ್ನುವುದು ಕಲಿತುಕೊಳ್ಳುವುದಕ್ಕೆ ಒಂದು ಅವಕಾಶ ಎಂದು ಸಕಾರಾತ್ಮಕ ಆಲೋಚನೆ ಉಳ್ಳವರು ನುಡಿವರು. ಬಹಳಷ್ಟು ಕಲಿತು, ಏನೆಲ್ಲ ಅನುಭವ ಗಳಿಸಿಕೊಂಡ ವ್ಯಕ್ತಿಗಳಿಗಿಂತ ಎಳೇ ಮಕ್ಕಳಲ್ಲಿ ಹದಿಹರೆಯದ ಯುವಕರಲ್ಲಿ ಸಮಸ್ಯೆಗಳನ್ನು ಎದುರಿಸುವ ಗುಣ ಹೆಚ್ಚಾಗಿರುತ್ತದೆ. ಎಳೆ ಮಕ್ಕಳಿಗೆ ಜೀವನದಲ್ಲಿ ಪ್ರತಿಯೊಂದು ಸಮಸ್ಯೆಯೇ ಆದರೆ ಆ ಸಮಸ್ಯೆಗಳನ್ನು ದಾಟುವುದರಲ್ಲಿ ಅವರು ಅತ್ಯದ್ಭುತ ಆನಂದ ಹೊಂದುತ್ತವೆ. ಇತರರು ಆನಂದ ಪಡುವಂತೆ ಮಾಡುತ್ತವೆ.

ನಮ್ಮಲ್ಲಿ ಬಹಳಷ್ಟು ಜನ ಏನನ್ನೋ ಸಾಧಿಸಬೇಕೆಂಬ ಹಂಬಲಕ್ಕಿಂತ, ಏನೋ ಆಗದೇ ಹೋಗುತ್ತದೆಯೇ? ಎಂದು ಆಸೆಯಿಂದ ನಿರೀಕ್ಷಿಸುತ್ತಿರುತ್ತಾರೆ. ಇಂಥವರು ಸಮಸ್ಯೆಗಳನ್ನು ಎದುರಿಸುವುದಕ್ಕೆ ಹೆದರುತ್ತಾರೆ. ಬದಲು ಫಲವನ್ನು ಮಾತ್ರ ಅಪೇಕ್ಷಿಸುತ್ತಾರೆ. ಇದು ಸರಿಯಲ್ಲ. ನಾವು ಸಮಸ್ಯೆಯಲ್ಲಿ ತಲ್ಲೀನವಾಗಬೇಕು. ಸಮಸ್ಯೆಗಳನ್ನು ಪ್ರೀತಿಸಿ, ಅವುಗಳನ್ನು ಪರಿಹರಿಸಿರಿ.

ಸಮಸ್ಯೆ ಒಂದು ಅವಕಾಶ. ಅದನ್ನು ಜೋಪಾನವಾಗಿ ಉಪಯೋಗಿಸಿಕೊಂಡರೆ ಅದು ನಮ್ಮ ಜೀವನದಲ್ಲಿ ಅದ್ಭುತಗಳನ್ನು ಸೃಷ್ಟಿಸುತ್ತದೆ. 'ಸಮಸ್ಯೆಗಳಿಂದ ನೀವು ದೂರವಿರಲು ಪ್ರಯತ್ನಿಸಿದರೆ ಅವು ನಿಮ್ಮನ್ನು ಮತ್ತಷ್ಟು ಹಿಂಸಿಸುತ್ತವೆ. ಯಾವುದೇ ಸಮಸ್ಯೆಯಾದರೂ ಅದರಿಂದ ದೂರ ಸರಿಯದೆ ಅದನ್ನು ಮತ್ತಷ್ಟು ಧೈರ್ಯದಿಂದ ಎದುರಿಸಬೇಕು.

ಎಷ್ಟೇ ಪ್ರಮುಖರಾದರೂ ಪ್ರತೀವ್ಯಕ್ತಿಯ ಬದುಕಿನಲ್ಲಿ ಅನೇಕ ವೈಫಲ್ಯಗಳಿರುತ್ತವೆ. ವೈಫಲ್ಯಗಳಿರದೇ ಯಾರು ಗೆಲ್ಲಲಾರರು. ಆದ್ದರಿಂದ ಸಮಸ್ಯೆಗಳು, ವೈಫಲ್ಯಗಳು ಎದುರಾದಾಗ ಕುಗ್ಗಬೇಡಿ. ಇಮ್ಮಡಿಸಿದ ಉತ್ಸಾಹ ದಿಂದ, ಗೋಡೆಗೆಸೆದ ಚೆಂಡಿನಂತೆ ಮುನ್ನುಗ್ಗಿ, ಆ ರಂಗದಲ್ಲಿ ವಿಜಯ ನಿಮಗಾಗಿ ಎದುರು ನೋಡುತ್ತಿದೆ ಎಂದು ಗುರುತಿಸಿ ಪ್ರಯತ್ನಿಸಿ ವಿಜಯ ನಿಮ್ಮದೆ.... ಸಮಸ್ಯೆಯಿಂದ ಫಲಾಯನ ಬೇಡ.

**-ಶ್ರೀಮತಿ ಶೋಭಾ ಎಚ್. ಕೋಟಿ, ಇಳಕಲ್**





# ಕಾವೇರಿ ಜಲ ವಿವಾದ-ನ್ಯಾಯಾಧೀಕರಣ ಅಂತಿಮ ತೀರ್ಪು *

-ಬಿ.ಎನ್. ಚನ್ನಪ್ಪ

**ಕಾವೇರಿ ನದಿ ಪಾತ್ರದ ಕರ್ನಾಟಕ ಹಾಗೂ ತಮಿಳುನಾಡು ರಾಜ್ಯಗಳ ವಾದ ವಿವಾದ :**

ಕರ್ನಾಟಕ ಹಾಗೂ ತಮಿಳುನಾಡು ರಾಜ್ಯಗಳೆರಡಕ್ಕೂ ಕಾವೇರಿಯು ಜೀವನದಿ. ಎರಡೂ ರಾಜ್ಯಗಳ ಜನಜೀವನ ಕಾವೇರಿಯನ್ನವಲಂಬಿಸಿದೆ. ಎರಡೂ ರಾಜ್ಯಗಳು ಸಾಮಾಜಿಕ, ಆರ್ಥಿಕ ಅಭಿವೃದ್ಧಿಯ ಜೊತೆಗೆ ಭಾವನಾತ್ಮಕ ಸಂಬಂಧ ವನ್ನು ಹೊಂದಿವೆ. ಹಾಗಾಗಿ ಎರಡೂ ರಾಜ್ಯಗಳು ತಮ್ಮ ಹಕ್ಕಿಗಾಗಿ ದಶಕಗಳಿಂದ ಹೋರಾಡುತ್ತಾ ಬಂದಿವೆ.

ಯಾವುದೇ ನದಿಯ ಜಲಾನಯನ ಪ್ರದೇಶದಿಂದ ಹರಿದು ಬರುವ ನೀರಿನ ಪ್ರಮಾಣದಿಂದ ಅದರ ಒಟ್ಟು ನೀರಿನ ಲಭ್ಯತೆಯನ್ನು ನಿರ್ಧರಿಸಲಾಗುತ್ತದೆ. ಹೀಗೆ ಲಭ್ಯ ವಿರುವ ನೀರನ್ನು ಉಪಯೋಗಿಸುವ ಹಕ್ಕು ನದೀ ಪಾತ್ರದ ಎಲ್ಲ ರಾಜ್ಯಗಳಿಗೂ ಇರುತ್ತದೆ. ಅನೇಕ ಅಂತರಾಷ್ಟ್ರೀಯ ಹಾಗೂ ರಾಷ್ಟ್ರೀಯ ತೀರ್ಪುಗಳನ್ನು ಅವಲೋಕಿಸಿದಾಗ ಯಾವುದೇ ರಾಜ್ಯ ಯಾವ ಕಾರಣದಿಂದಲೇ ಆಗಲಿ ತನ್ನ ಪಾಲಿಗಿಂತ ಹೆಚ್ಚಾಗಿ ಯುಕ್ತ ಹಾಗೂ ಸಮಂಜಸ ಕಾರಣ ವಿಲ್ಲದೆ ಉಪಯೋಗಿಸುವಂತಿಲ್ಲ. ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ನೀತಿಯಂತೆ ನದೀಪಾತ್ರದ ರಾಜ್ಯಗಳಿಗೆ ಸರ್ವ ಸಮ್ಮತವಾದ, ಸಮವಾದ ಮತ್ತು ನಿಷ್ಪಕ್ಷಪಾತವಾದ ನೀರಿನ ಹಕ್ಕು ಇರುತ್ತದೆ.

ನ್ಯಾಯಾಧೀಕರಣದ ಮುಂದೆ ಎರಡೂ ರಾಜ್ಯಗಳು ಮಂಡಿಸಿದವಾದ ವಿವಾದಗಳ ಮುಖ್ಯಾಂಶಗಳು ಹೀಗಿವೆ:

**ತಮಿಳುನಾಡು :** 1924ರ ಒಪ್ಪಂದಕ್ಕೆ ಮುಂಚೆಯೇ ತಾನು 16.22 ಲಕ್ಷ ಎಕರೆ ಪ್ರದೇಶದಲ್ಲಿ ನೀರಾವರಿಯನ್ನು ಕಾವೇರಿ ಕಣಿವೆಯಲ್ಲಿ ಅಭಿವೃದ್ಧಿಪಡಿಸಲಾಗಿತ್ತೆಂದು ಮತ್ತು 1924ರ ಒಪ್ಪಂದದಂತೆ 1974ನೇ ಇಸವಿಯೊಳಗೆ ಮತ್ತೆ 11.13 ಲಕ್ಷ ಎಕರೆ ಪ್ರದೇಶವನ್ನು ನೀರಾವರಿಗೆ ಒಳಪಡಿಸಲಾಯಿತೆಂದು ಹಾಗೂ 1990 ಜೂನ್ ತಿಂಗಳವರೆಗೆ ಇನ್ನೂ 1.91 ಲಕ್ಷ ಎಕರೆಗೆ ವಿಸ್ತರಿಸಿ ಒಟ್ಟು ನೀರಾವರಿ ಪ್ರದೇಶವಾದ 29.269 ಲಕ್ಷ ಎಕರೆಗಳಿಗೆ ನೀರಿನ ಅಗತ್ಯತೆಯನ್ನು ಪ್ರತಿಪಾದಿಸಿತು. ಅಲ್ಲದೆ ಮೊದಲೇ ತಿಳಿಸಿದಂತೆ ತನ್ನ ಸ್ವಾಧೀನಾನುಭವದ ಹಕ್ಕಿನ ದೃಷ್ಟಿಯಿಂದ(perspective Right) ತನ್ನ ನೀರಾವರಿ ಪ್ರದೇಶವನ್ನು ರಕ್ಷಿಸಬೇಕೆಂದು ಪ್ರತಿಪಾದಿಸಿತು. ಅಲ್ಲದೆ ತಾನು ಕಾವೇರಿ ಡೆಲ್ಟ ಪ್ರದೇಶದಲ್ಲಿ ವರ್ಷಕ್ಕೆ ಮೂರು ಬೆಳೆಯನ್ನು (Kuruvai, Samba and Thaladi) ಬೆಳೆಯುತ್ತಿರುವುದಾಗಿ ಅದಕ್ಕೆ ನೀರಿನ ಅವಶ್ಯಕತೆಗನುಗುಣವಾಗಿ ನೀರನ್ನು ಹಂಚಿಕೆ ಮಾಡ ಬೇಕೆಂದು ಕೇಳಿಕೆ ಸಲ್ಲಿಸಿತು. ಅಲ್ಲದೆ ಅಂತರ್ಜಲವನ್ನು ಪರಿಗಣಿಸಬಾರದೆಂದು, ಅಂತರ್ಜಲವು ಬಹುಮಟ್ಟಿಗೆ ಮೆಟ್ಟೂರು ಜಲಾಶಯದಿಂದ ಬಿಡುಗಡೆಯಾದ ನೀರೆಂದು ವಾದ ಮಾಡಿತು. 1924ರ ಒಪ್ಪಂದವು ಇಂದಿಗೂ ಸಿಂಧು ವೆಂದು ವಾದ ಹೂಡಿತು.

**ಕರ್ನಾಟಕ :** ಕರ್ನಾಟಕ ತನ್ನ ವಾದದಲ್ಲಿ 1892ಮತ್ತು 1924ರ ಒಪ್ಪಂದಗಳು ಅಪ್ರಸ್ತುತವೆಂದು ಮತ್ತು 1924ರ ಒಪ್ಪಂದವು 1974ಕ್ಕೆ ಮುಗಿದ ಅಧ್ಯಾಯವೆಂದು ತಿಳಿಸಿತು. ತಾನು ಮೇಲ್ಕಂಡ ಒಪ್ಪಂದಗಳು ಹಾಗೂ ಮದರಾಸು ರಾಜ್ಯದ ಸತತ ಅಡಚಣೆಯಿಂದ ನೀರಾವರಿ ಪ್ರದೇಶವನ್ನು ವಿಸ್ತರಿಸಲಾಗಲಿಲ್ಲವೆಂದು ತಿಳಿಸಿತು. ಅಲ್ಲದೆ ಅನೇಕ ಉದ್ದೇಶಿತ ಯೋಜನೆಗಳು ಇನ್ನೂ ಕಾರ್ಯಗತವಾಗ ಬೇಕೆಂದೂ, ಅವೆಲ್ಲ ಯೋಜನೆಗಳನ್ನು ಪರಿಗಣಿಸಬೇಕೆಂದು ವಾದ ಮಾಡಿತು. ಅಲ್ಲದೆ ನೀರಿನ ಹಂಚಿಕೆ ಮಾಡುವಾಗ ಮದರಾಸಿನ ಪ್ರದೇಶದಲ್ಲಿನ ಅಂತರ್ಜಲ (ಸುಮಾರು 130 ಟಿಎಂಸಿ)ವನ್ನು ಪರಿಗಣಿಸಬೇಕೆಂದು ಕೇಳಿಕೆ ಸಲ್ಲಿಸಿತು. ಅಲ್ಲದೆ ಕರ್ನಾಟಕ ಈ ಕೆಳಕಂಡ ಅಚ್ಚುಕಟ್ಟು ಪ್ರದೇಶದ ಅಗತ್ಯತೆಯನ್ನು ಅನುಸರಿಸಿ ನೀರಿನ ಪಾಲನ್ನು ಕೊಡ ಬೇಕೆಂದು ವಾದ ಮಂಡಿಸಿತು.

| | | |
|---|---|---|
| ಅ. | 1924ರವರೆಗೆ | – 2.030 ಲಕ್ಷ |
| ಆ. | 1924ರಿಂದ 1974ರವರೆಗೆ | – 3.378 ಲಕ್ಷ |

* ನಂ. ೧೧೧೫, ೧೧ನೇ ಮುಖ್ಯರಸ್ತೆ, ವೆಸ್ಟ್ ಆಫ್ ಕಾರ್ಡ್ ರೋಡ್, ೨ನೇ ಹಂತ, ಮಹಾಲಕ್ಷ್ಮೀಪುರಂ ಅಂಚೆ, ಬೆಂಗಳೂರು.

ಇ. 1924 ಒಪ್ಪಂದದ ಪ್ರಕಾರ
1974ರ ನಂತರದ ಪ್ರದೇಶ – 1.10 ಲಕ್ಷ
ಈ. 1990ರವರೆಗೆ ಸಣ್ಣ ನೀರಾವರಿ
ಮತ್ತು ಇತರೆ ಪ್ರದೇಶಗಳು – 3.792ಲಕ್ಷ
ಉ. 1974ರ ನಂತರ ನಡೆಯುತ್ತಿರುವ
ಹಾಗೂ ಉದ್ದೇಶಿತ ಯೋಜನೆಗಳು
– 18.288ಲಕ್ಷ

ಒಟ್ಟು **29.707ಲಕ್ಷ**

**ನೀರಿನ ಲಭ್ಯತೆ :** ಎಲ್ಲ ರಾಜ್ಯಗಳ ಒಪ್ಪಿಗೆಯಂತೆ, 1972ರಲ್ಲಿ ವಸ್ತುಸ್ಥಿತಿಯನ್ನು ಅನುಸರಿಸಿ ವರದಿ ಮಾಡಲು 'ವಾಸ್ತವಾಂಶ ಪತ್ತೆ ಸಮಿತಿ (Central Fact finding Committee) ಯನ್ನು ಕೇಂದ್ರವು ನೇಮಿಸಿತು. ಅದರ ಪ್ರಕಾರ ವಿವರಗಳು ಕೆಳಕಂಡಂತಿವೆ.(1973ರ ವರದಿಯಂತೆ)

**ನೀರಾವರಿ ಪ್ರದೇಶ**

| ತಮಿಳುನಾಡು | ಕರ್ನಾಟಕ | ಕೇರಳ |
|---|---|---|
| 28.208ಲಕ್ಷ | 6.825ಲಕ್ಷ | 0.534ಲಕ್ಷ |

**ನೀರಿನ ಬಳಕೆ**

| | | |
|---|---|---|
| 566.60ಟಿಎಂಸಿ | 176.82ಟಿಎಂಸಿ | 5ಟಿಎಂಸಿ. |

ಮೇಲ್ಕಂಡ ಸಮಿತಿಯು ನೀರಿನ ಒಟ್ಟು ಲಭ್ಯತೆಯನ್ನು ಫ್ರೀಕ್ವೆನ್ಸಿ ಅನಾಲಿಸಿಸ್ (Frequency Analysis) ಅನ್ವಯಿಸಿ ಶೇ. 50ರ ಅವಲಂಬನೆಯಂತೆ (50% Dependability) ತೀರ್ಮಾನಿಸಿತು. ಅದರಂತೆ ಕಾವೇರಿ ಕಣಿವೆಯಲ್ಲಿ ಒಟ್ಟು ನೀರಿನ ಲಭ್ಯತೆಯ ಪ್ರಮಾಣ 740 ಟಿಎಂಸಿ ಇದನ್ನು ಎಲ್ಲಾ ರಾಜ್ಯಗಳು ಒಪ್ಪಿಕೊಂಡಿವೆ.

**ನದೀ ಪಾತ್ರದ ರಾಜ್ಯಗಳಿಗೆ ನೀರಿನ ಹಂಚಿಕೆ :**

ನ್ಯಾಯಾಧೀಕರಣವು ನೀರಿನ ಹಂಚಿಕೆಯನ್ನು ರಾಜ್ಯಗಳಿಗೆ ಸ್ವಾಭಾವಿಕ/ನೈಸರ್ಗಿಕ ನ್ಯಾಯದ ಆಧಾರದ (Natural Justice) ಮೇಲೆ ಹಂಚಿಕೆ ಮಾಡಬೇಕಾಗುತ್ತದೆ ಎಂದು ಹೇಳಿದೆ. ಎಲ್ಲ ರಾಜ್ಯಗಳ ನೀರಿನ ಬೇಡಿಕೆ 1260 ಟಿ.ಎಂ.ಸಿ. ಆದರೆ ಲಭ್ಯವಿರುವ ನೀರಿನ ಪ್ರಮಾಣ ಕಡಿಮೆ ಇರುವ ಕಾರಾಣ ಎಲ್ಲರಿಗೂ ಸಮವಾಗಿ ಮತ್ತು ನ್ಯಾಯಯುತವಾಗಿ ಹಂಚಬೇಕಾಗುತ್ತದೆ.

ತಮಿಳುನಾಡಿನ ತನ್ನ ಸ್ವಾಧೀನಾನುಭವದ ಹಕ್ಕಿನ ದೃಷ್ಟಿಯಿಂದ (Prescriptive Rights) ತನ್ನ ನೀರಾವರಿ ಪ್ರದೇಶವನ್ನು ರಕ್ಷಿಸಬೇಕೆಂದು ವಾದಿಸುತ್ತದೆ. ನ್ಯಾಯಾಧೀಕರಣವು ಅನೇಕ ಅಂತರಾಷ್ಟ್ರೀಯ ತೀರ್ಪುಗಳನ್ನು ಉದಾಹರಿಸಿ ಯಾವುದೇ ರಾಜ್ಯ ತನ್ನ ಪಾಲಿಗಿಂತ ಹೆಚ್ಚಿನ ಭಾಗವನ್ನು ಪಡೆಯಬಾರದು. ಮೊದಲು ನೀರಾವರಿಗೆ ಒಳಪಟ್ಟ ಪ್ರದೇಶವು ಒಂದು ಕಾರಣವಾಗಬಹುದು. ಆದರೆ ಆ ಕಾರಣದಿಂದ ಆದ್ಯತೆಯ ತತ್ವವನ್ನು ಅನುಸರಿಸಲಾಗದು. (Priority Rule) (USA Supreme Court-Nebraska Vs Wyoming Case) ಪ್ರತಿ ರಾಜ್ಯದಲ್ಲಿ ಅದರ ಆರ್ಥಿಕ, ಸಾಮಾಜಿಕ ಪರಿಸ್ಥಿತಿ, ನೀರಿನ ಹರಿವು ಮತ್ತು ಪ್ರಮಣ, ಪ್ರತಿ ರಾಜ್ಯದ ನೀರಿನ ಕೊಡುಗೆ, ಜನಸಂಖ್ಯೆ, ಅಚ್ಚುಕಟ್ಟು, ವಾಯುಗುಣ ಮತ್ತು ಭೌತಿಕ ಗುಣಗಳು, ನೀರಿನ ಸದ್ಬಳಕೆ ಇತ್ಯಾದಿ, ಪರಿಗಣಿಸಿ ಸಮವಾಗಿ ಹಾಗೂ ನ್ಯಾಯಯುತವಾಗಿ (Just and equitable apportionment) ನೀರನ್ನು ಹಂಚಿಕೆ ಮಾಡಬೇಕಾಗುತ್ತದೆ.

ಹೆಲ್ಸಿಂಕಿ 1966ರ ನಿಯಮದಂತೆ ಎಲ್ಲರಿಗೂ ಸಮಾನ ಹಕ್ಕು ಇರುತ್ತದೆ ಎಂಬುದು ನಿರ್ವಿವಾದ. ಯಾವುದೇ ರಾಜ್ಯ ಸಾರ್ವಭೌಮತ್ವವನ್ನು ಸ್ಥಾಪಿಸಲು ಅವಕಾಶವಿಲ್ಲ, ಅದು ಸಾಧುವೂ ಅಲ್ಲ.

ಈ ಜಲ ವಿವಾದದಲ್ಲಿ, ಮೈಸೂರು ರಾಜ್ಯ ಉಪಯೋಗಿಸುತ್ತಿದ್ದ ನೀರು ಮದರಾಸಿಗೆ ಹೋಲಿಸಿದರೆ ಬಹಳ ಕಡಿಮೆ. ಅನೇಕ ನ್ಯಾಯಲಯಗಳ ತೀರ್ಪಿನಂತೆ ಹಾಗೂ ನೈಸರ್ಗಿಕ ನ್ಯಾಯದಂತೆ (Natural Justice) ಯಾವುದೇ ರಾಜವು ತನ್ನ ನ್ಯಾಯವಾದ ಪಾಲಿಗಿಂತ ಹೆಚ್ಚು ಪಡೆಯಲು ಅರ್ಹತೆ ಇರುವುದಿಲ್ಲ.

(The Supreme Court of USA, in several cases decided that neither the upper reiparian state can claim paramount right for more water than reasonably required nor the lower reparian state can claim based on prescriptive Right to the flow of water)

**ಅಚ್ಚುಕಟ್ಟು ಪ್ರದೇಶ :**

ನೀರಿನ ಹಂಚಿಕೆ ಮಾಡುವ ಮೊದಲು ನೀರಾವರಿ ಪ್ರದೇಶವೆಷ್ಟೆಂಬುದನ್ನು ತಿಳಿಯಬೇಕು. ನ್ಯಾಯಾಧೀಕರಣವು ಅದನ್ನು ಈ ಕೆಳಕಂಡಂತೆ ನಿರ್ಧರಿಸಿದೆ.





1) 1924ರ ಒಪ್ಪಂದ ಮುಂಚಿನ ಅಚ್ಚುಕಟ್ಟು.
2) 1924ರ ಒಪ್ಪಂದದಂತೆ ಉದ್ದೇಶಿಸಿದ ಪ್ರದೇಶ.
3) 1924ರ ಒಪ್ಪಂದವನ್ನು ಬಿಟ್ಟು 02–06–1990ರವರೆಗೆ (ನ್ಯಾಯಾಧೀಕರಣ ಅಸ್ತಿತ್ವಕ್ಕೆ ಬಂದ ದಿನಾಂಕ) ಅಭಿವೃದ್ಧಿ ಪಡಿಸಿದ ನೀರಾವರಿ ಪ್ರದೇಶ.
4) ಸಮನಾಗಿ ಹಾಗೂ ನ್ಯಾಯಯುತವಾದ ಹಂಚಿಕೆಯ ಆಧಾರದ ಮೇಲೆ ಅಭಿವೃದ್ಧಿಪಡಿಸಬಹುದಾದ ಪ್ರದೇಶ.

**ಎರಡೂ ರಾಜ್ಯ ಸಲ್ಲಿಸಿದ ವಿವರ :**

| **ತಮಿಳುನಾಡು** | **ಕರ್ನಾಟಕ** |
|---|---|
| **1924ರ ಒಪ್ಪಂದದವರೆಗೆ** | |
| 16.220ಲಕ್ಷ | 2.03ಲಕ್ಷ |
| **1924ರಿಂದ 1974ರವರೆಗೆ** | |
| 11.351ಲಕ್ಷ | 2.03ಲಕ್ಷ |
| **1924ರ ಒಪ್ಪಂದದಂತೆ 1974ರ ನಂತರದ ಪ್ರದೇಶ** | |
| – | 1.10 ಲಕ್ಷ |
| **1990ರವರೆಗೆ ಇತರ ಪ್ರದೇಶ ಮತ್ತು ಸಣ್ಣ ನೀರಾವರಿ** | |
| 0.463ಲಕ್ಷ | 3.792ಲಕ್ಷ |
| **1974ರ ನಂತರ ನಡೆಯುತ್ತಿರುವ ಹಾಗೂ ಉದ್ದೇಶಿತ ಯೋಜನೆಗಳ ಪ್ರಕಾರ** | |
| 1.455ಲಕ್ಷ | 18.288ಲಕ್ಷ |
| **ಒಟ್ಟು 29.269ಲಕ್ಷ ಎಕರೆ** | **29.707ಲಕ್ಷಎಕರೆ** |

ನ್ಯಾಯಾಧೀಕರಣವು ಮದರಾಸು ರಾಜ್ಯದಲ್ಲಿ ಬೆಳೆಯುವ ಎರಡನೇ ಬೆಳೆಯನ್ನು ಹಿಂದಿನಿಂದ ಬೆಳೆಯುತ್ತಿರುವುದರಿಂದ ಆ ಪ್ರದೇಶವನ್ನು ಗಣನೆಗೆ ತೆಗೆದುಕೊಳ್ಳಲು ತೀರ್ಮಾನಿಸುತ್ತದೆ. (CFFC ಪ್ರಕಾರ ಆದಷ್ಟು ಎರಡನೇ ಬೆಳೆಯನ್ನು ಮಿತಿಗೊಳಿಸಬೇಕು).

ಮದರಾಸು ರಾಜ್ಯವು ಭತ್ತದ ಬೆಳೆಗೂ, ಕರ್ನಾಟಕವು ಬಹುಮಟ್ಟಿಗೆ ಅರೆ ನೀರಾವರಿ ಬೆಳೆಗೂ ನೀರಿನ ಬೇಡಿಕೆಯನ್ನು ಮಂಡಿಸುತ್ತದೆ. ಮೇಲೆ ಹೇಳಿದ ನೀರಾವರಿ ಪ್ರದೇಶಗಳನ್ನು ಪರಿಶೀಲಿಸಿ ತಮಿಳುನಾಡಿಗೆ ಈ ಕೆಳಕಂಡ ಅಚ್ಚುಕಟ್ಟು ಪ್ರದೇಶವನ್ನು ನಿರ್ಧರಿಸುತ್ತದೆ.

ತಮಿಳುನಾಡಿನ ಅಚ್ಚುಕಟ್ಟು ಪ್ರದೇಶ :
1. 1924ರ ಒಪ್ಪಂದಕ್ಕೆ ಮುನ್ನ – 15.193ಲಕ್ಷ
2. 1924ರ ಒಪ್ಪಂದದಂತೆ – 6.195ಲಕ್ಷ
3. ಒಪ್ಪಂದ ಬಿಟ್ಟು ಅಭಿವೃದ್ಧಿಯಾದ ಪ್ರದೇಶ ಮತ್ತು ಸಣ್ಣ ನೀರಾವರಿ
2.065+1.248=3.313 – 3.313ಲಕ್ಷ
ಇದರಲ್ಲಿ ಅ) ಭತ್ತ – 22.26 ಲಕ್ಷ ಎಕರೆ
ಆ) ಅರೆ ನೀರಾವರಿ – 2.44 ಲಕ್ಷ ಎಕರೆ
ಒಟ್ಟು ಬೇಕಾಗುವ ನೀರಿನ ಪ್ರಮಾಣ – 390.85 ಟಿಎಂಸಿ

ಕರ್ನಾಟಕದ ಅಚ್ಚುಕಟ್ಟು ಪ್ರದೇಶ :
1. 1924ರ ಒಪ್ಪಂದಕ್ಕೆ ಮುನ್ನ – 3.439ಲಕ್ಷ
2. 1924ರ ಒಪ್ಪಂದದಂತೆ – 7.240ಲಕ್ಷ
3. ಹೊಸ ಯೋಜನೆಗಳು ಮತ್ತು ಸಣ್ಣ ನೀರಾವರಿ
6.913+1.261=8.174 – 8.174ಲಕ್ಷ
ಒಟ್ಟು – 18.85 ಲಕ್ಷ ಎಕರೆ
ಒಟ್ಟು ಬೇಕಾಗುವ ನೀರಿನ ಪ್ರಮಾಣ – 250.62 ಟಿಎಂಸಿ

ವಿವಿಧ ಬೆಳೆಗಳಿಗೆ ಬೇಕಾಗುವ ನೀರಿನ ಪ್ರಮಾಣವನ್ನು ಡೆಲ್ಪ (Water Depth) ರೀತಿಯಲ್ಲಿ ಪ್ರತಿರಾಜ್ಯದ ಅಚ್ಚುಕಟ್ಟು ಪ್ರದೇಶವನ್ನನುಸರಿಸಿ ಲೆಕ್ಕ ಮಾಡಿ ನಿಗದಿಪಡಿಸಲಾಗಿದೆ.

ಕರ್ನಾಟಕದ ಬೆಳೆಗಳ ವಿವರ ಈ ರೀತಿ ಇದೆ :

| | | |
|---|---|---|
| ಭತ್ತ | – | 7.67 ಲಕ್ಷ ಎಕರೆಗಳು |
| ಕಬ್ಬು | – | 0.40 ಲಕ್ಷಎಕರೆಗಳು |
| ಅರೆ ನೀರಾವರಿ | – | 10.78 ಲಕ್ಷಎಕರೆಗಳು |
| **ಒಟ್ಟು** | – | **18.85 ಲಕ್ಷ ಎಕರೆಗಳು** |

ಕರ್ನಾಟಕ ಸೆಪ್ಟೆಂಬರ್ 1990ರಲ್ಲಿ ಸಲ್ಲಿಸಿದ ಮನವಿಯಲ್ಲಿ 23.85 ಲಕ್ಷ ಎಕರೆ ಪ್ರದೇಶದ ವಿವರವಿತ್ತು. ಇದರಲ್ಲಿ ಉದ್ದೇಶಿತ ಯೋಜನೆಗಳ ಅಚ್ಚುಕಟ್ಟು ಸೇರಿತ್ತು. ಸಣ್ಣ ನೀರಾವರಿಯ 6.19 ಲಕ್ಷವೂ ಸೇರಿತ್ತು. ಆದರೆ ನ್ಯಾಯಾಧೀಕರಣವು 3.30 ಲಕ್ಷ ಸಣ್ಣ ನೀರಾವರಿ ಪ್ರದೇಶವನ್ನು ಮಾತ್ರ ಗಣನೆಗೆ ತೆಗೆದುಕೊಂಡಿತು. 1924ರ ಮುಂಚಿನ

ಪ್ರದೇಶ ಅಂದರೆ ಕಾಲುವೆಗಳ ಮುಖಾಂತರ ನೀರಾವರಿ ಯಾಗುತ್ತಿದ್ದ ಪ್ರದೇಶ ಮಾತ್ರ ಪರಿಗಣಿಸಲಾಯಿತು. ಅಲ್ಲದೆ ಉದ್ದೇಶಿತ ಯೋಜನೆಗಳ ಮತ್ತು ಕಾರ್ಯಗತವಾಗುತ್ತಿರುವ ಹಾಗೂ ಉದ್ದೇಶಿತ ಏತ ನೀರಾವರಿ ಅಚ್ಚುಕಟ್ಟನ್ನು ನ್ಯಾಯಾಧೀಕರಣವು ಪರಿಗಣಿಸಿಲ್ಲ. ಕಾಲುವೆಗಳ ಮುಖಾಂತರ ಬೆಳೆಯುತ್ತಿದ್ದ ಎರಡನೇ ಬೆಳೆಯನ್ನು ಗಣನೆಗೆ ತೆಗೆದು ಕೊಂಡಿಲ್ಲ. ಹಾಗಾಗೈ 18.85 ಲಕ್ಷ ಎಕರೆಗೆ ಸೀಮಿತಗೊಳಿಸ ಲಾಯಿತು.

**ನೀರಿನ ಹಂಚಿಕೆ–ನ್ಯಾಯಾಧೀಕರಣದ ತೀರ್ಮಾನದಂತೆ:**

ಕಾವೇರಿ ನದಿಯಲ್ಲಿ ಲಭ್ಯವಿರುವ ನೀರಿನ ಪ್ರಮಾಣ 740 ಟಿಎಂಸಿ, ಎರಡೂ ರಾಜ್ಯಗಳ ಬೇಡಿಕೆ ಈ ರೀತಿ ಇದೆ.

| | | |
|---|---|---|
| ತಮಿಳುನಾಡು | – | 566ಟಿಎಂಸಿ |
| ಕರ್ನಾಟಕ | – | 410ಟಿಎಂಸಿ |

ಲಭ್ಯವಿರುವ ನೀರನ್ನು ಎಲ್ಲಾ ನಾಲ್ಕು ರಾಜ್ಯಗಳಿಗೂ ನ್ಯಾಯಯುತವಾಗಿ ಹಾಗೂ ಸಮವಾಗಿ ಅವುಗಳ ಅವಶ್ಯಕತೆಗಳಿಗನುಗುಣವಾಗಿ (Fair and equitable distribution of water) ಮಿತಿಗೊಳಿಸಿ ಹಂಚಲಾಗಿದೆ ಯೆಂದು ನ್ಯಾಯಾಧೀಕರಣ ಹೇಳುತ್ತದೆ. ಅನೇಕ ಅಂತರ ರಾಷ್ಟ್ರೀಯ ಹಾಗೂ ರಾಷ್ಟ್ರೀಯ ತೀರ್ಪುಗಳನ್ನನುಸರಿಸ ಲಾಗಿದೆ ಎಂದು ತಿಳಿಸುತ್ತದೆ. Upper riparian state is having equal right to develop ಎಂದು ಪದೇ ಪದೇ ಹೇಳಿದ್ದರೂ 1924ರ ಒಪ್ಪಂದವನ್ನು ಮುಂದು ಮಾಡಿ ಕೊಂಡು ಕರ್ನಾಟಕಕ್ಕೆ ಸಾಕಷ್ಟು ಅನ್ಯಾಯವೆಸಗಲಾಗಿದೆ.

ತಮಿಳುನಾಡಿಗೆ ತನ್ನ 24.71 ಲಕ್ಷ ಎಕರೆಗೆ ಡೆಲ್ಟ ರೀತಿಯನ್ನು ಅನುಸರಿಸಿ (Water depth required for crop) ನೀರಿನ ಪ್ರಮಾಣವನ್ನು ನಿಗದಿಗೊಳಿಸಲಾಗಿದೆ. ಅದರಂತೆ

**ತಮಿಳುನಾಡಿಗೆ :**

ಅ. ನೀರಾವರಿಗೆ – 390.85ಟಿಎಂಸಿ

ಆ. ಕುಡಿಯುವ ಹಾಗೂ ಕೈಗಾರಿಕೆಗೆ – 2.73 ಟಿಎಂಸಿ

ಇ. ಉಳಿದ ನೀರಿನ ಭಾಗ – 25.71ಟಿಎಂಸಿ

**ಒಟ್ಟು – 419.29ಟಿಎಂಸಿ**

ಇದಲ್ಲದೆ ಪರಿಸರ ಸಂರಕ್ಷಣೆಗೆ 10 ಟಿಎಂಸಿ ಕೊಡಲಾಗಿದೆ.

**ಕರ್ನಾಟಕಕ್ಕೆ :**

ಅ. ನೀರಾವರಿಗೆ – 250.62ಟಿಎಂಸಿ

ಆ. ಕುಡಿಯುವ ಹಾಗೂ ಕೈಗಾರಿಕೆಗೆ – 1.85 ಟಿಎಂಸಿ

ಇ. ಉಳಿದ ನೀರಿನ ಭಾಗ – 17.64ಟಿಎಂಸಿ

**ಒಟ್ಟು 270.11ಟಿಎಂಸಿ**

**ಕೇರಳಕ್ಕೆ :** 30.00 ಟಿಎಂಸಿ

**ಪಾಂಡಿಚೇರಿಗೆ :** 7.00 ಟಿಎಂಸಿ

–ಮುಂದುವರಿಯುತ್ತದೆ.

## ವಿಜಯದ ಸಂಕೇತ

ಈ ಐಕ್ಯವು ನಮ್ಮ ಜೀವನದ ರಕ್ಷಾಕವಚ. ಅದರಿಂದಲೇ ನಮಗೆ ಧೈರ್ಯ. ಅದರಿಂದಲೇ ನಮಗೆ ಜಯ. ಈ ಐಕ್ಯದಲ್ಲಿ ಮಾಧುರ್ಯವೊಂದೇ ಇಲ್ಲ. ಅದರಲ್ಲಿ ಜಾಜ್ವಲ್ಯಮಾನವಾಗಿ ಬೆಳಗುವ ದೀಪ್ತಿಯ ಪ್ರಖರತೆಯೂ ಇದೆ. ಸಂತೃಪ್ತಿಗೊಂದೇ ಅಲ್ಲದೆ ಶಕ್ತಿಗೂ ಅದೇ ಆಶ್ರಯಸ್ಥಾನವಾಗಿದೆ. ನಮ್ಮ ಕಣ್ಣೆದುರು ಮೂಡಿ ನಿಂತಿರುವ ನಮ್ಮ ನಾಡಿನ ರಾಷ್ಟ್ರೀಯತೆಯು ಯಾವನೊಬ್ಬ ದೊರೆಯ ಕೃಪೆ ಅಥವಾ ಅವಕೃಪೆಯಿಂದ ಬಂದ ಪ್ರಸಾದವಲ್ಲ. ಒಂದು ಶಾಸನವು ಸ್ವೀಕೃತವಾಗಲಿ ಅಥವಾ ಆಗದೇ ಇರಲಿ, ಇಂಗ್ಲೆಂಡಿನ ಜನ ತಮ್ಮ ಆರ್ತನಾದವನ್ನು ಕೇಳಲಿ ಅಥವಾ ಕೇಳದೇ ಇರಲಿ, ನಮ್ಮ ದೇಶವು ಎಂದೆಂದಿಗೂ ನಮ್ಮ ದೇಶವಾಗಿಯೇ ಉಳಿಯುತ್ತದೆ. ಇದು ನಮ್ಮ ತಂದೆ ತಾಯಿಗಳ ನಾಡು; ನಮ್ಮ ಮಕ್ಕಳು ಮರಿಗಳ ನಾಡು; ನಮಗೆ ಶಕ್ತಿಯನ್ನೂ, ಕ್ಷೇಮವನ್ನೂ, ಜೀವವನ್ನೂ ಒದಗಿಸುವ ನಾಡು. ದೇವರ ದಯೆಯಿಂದ ನಮಗಿಂದು ತಿಳುವಳಿಕೆ ಪ್ರಾಪ್ತವಾಗಿದೆ. ಐಕ್ಯದಲ್ಲಿಯೇ ವಿಜಯವಿದೆ ಯೆಂದು ನಾವು ಮನಗಾಣತೊಡಗಿದ್ದೇವೆ. ಪುನರುಜ್ಜೀವದ ಬಗೆಗೆ ಯೋಚನೆಯನ್ನೇ ಮಾಡದ ಈ ಹಳೆಯ ದಿನಗಳ ನೆನಹು ಇಲ್ಲಿಗೇ ಮುಗಿದು ಹೋಗಲಿ.

–ರವೀಂದ್ರನಾಥ ಠಾಕೂರ





# ಸಂಗೀತ – ಒಂದು ದೇವ ಕಲೆ

–ಎಂ.ಬಿ. ಶಿವಕುಮಾರಸ್ವಾಮಿ *

**ಪ್ರಯೋಜನ :**

ಜಗತ್ತಿನ ಪ್ರತಿ ಜೀವಿಯೂ ಸಂಗೀತದಿಂದ ಹೊರತಾಗಿಲ್ಲ. ಅದು ಬದುಕಿನ ಅವಿಭಾಜ್ಯ ಅಂಗ. ಓಂಕಾರ ನಾದ ಆದಿಯಾಗಿ ಪ್ರತಿಯೊಂದು ಸುಶ್ರಾವ್ಯ ಶಬ್ದ ತರಂಗವೂ ಸಂಗೀತವೆಂದೇ ಹೇಳಬಹುದು. ಯಾವ ಒಂದು ಶಬ್ದ ಆನಂದ ನೀಡುವುದೋ ಅದು ಸಂಗೀತ.

ಉದಾಹರಣೆಗೆ ಕೋಗಿಲೆಯ ಗಾನ ಮತ್ತು ಕೊಳಲು ನಾದ. ಕೋಗಿಲೆಯ ಗಾನ ಇಡೀ ಮನುಕುಲಕ್ಕೆ ಹಿತಕರ ವಾಗಿದೆ. ಕೋಗಿಲೆ ಹಾಡಿತೆಂದರೆ ಅದನ್ನು ಎಲ್ಲರೂ ಹೃದಯಪೂರ್ವಕವಾಗಿ ಆನಂದಿಸುತ್ತಾರೆ. ಹಾಗೆಯೇ, ಕೊಳಲು ನಾದಕ್ಕೆ ಪಶುಗಳು ತಮ್ಮ ಕಿವಿಗಳನ್ನು ನಿಮಿರಿಸಿ ಕೊಂಡು ಇದ್ದಲ್ಲಿಯೇ ಧ್ವನಿಯನ್ನು ಆಲಿಸುತ್ತವೆ.

ಸಂಗೀತದ ಪ್ರಯೋಜನ ಮತ್ತು ಶಕ್ತಿಯನ್ನು ವಿವಿಧ ಕೋನಗಳಲ್ಲಿ ನೋಡಿದಾಗ ಸಂಗೀತದ ಮಹತ್ವ ಏನೆಂಬುದು ಮತ್ತಷ್ಟು ತಿಳಿಯುತ್ತದೆ. ಅದರಲ್ಲಿ ಕೆಲವನ್ನು ಇಲ್ಲಿ ಉಲ್ಲೇಖಿಸಲಾಗಿದೆ.

ಸಂಗೀತದಿಂದ ಸಸ್ಯರಾಶಿಗಳು ಪುಳಕಿತಗೊಂಡು ಮತ್ತಷ್ಟು ಶಕ್ತಿಯನ್ನು ಪಡೆದುಕೊಳ್ಳಲಿವೆ; ರಾಜಾ ವಿಕ್ರಮಾದಿತ್ಯ ದೀಪಕರಾಗ ಹಾಕಿ ದೀಪ ಬೆಳಗಿಸಿದ್ದನ್ನು ಪುರಾಣದಿಂದ ತಿಳಿಯುತ್ತೇವೆ. ಸಂಗೀತದಿಂದ ಮನುಷ್ಯ ಮಾನಸಿಕವಾಗಿ ಮತ್ತು ಭೌತಿಕವಾಗಿ ಸದೃಢನಾಗುತ್ತಾನೆ. ಅದರಿಂದಾಗಿ ಅವನು ತನ್ನ ನಿತ್ಯಜೀವನದಲ್ಲೇ ಆರೋಗ್ಯವಂತನಾಗಿ, ಸಂತೋಷದಿಂದ ತನ್ನ ಕುಟುಂಬದ ಮತ್ತು ಉದ್ಯೋಗದ ವಿಚಾರದಲ್ಲಿ ಸಂಪೂರ್ಣ ತೃಪ್ತಿಯನ್ನು ಹೊಂದುತ್ತಾನೆ.

ಸಂಗೀತ, ಸಾಮಾಜಿಕವಾಗಿಯೂ ಒಂದು ಜೀವಕಲೆ. ಇದರ ಅಭಿರುಚಿ ಇರುವ ಪ್ರತಿಯಿಬ್ಬರೂ ನೀತಿವಂತರಾಗಿ ಸದೃಢರಾಗಿ, ದೈವೀಭಾವನೆ ಹೊಂದಿ ಒಳ್ಳೆಯ ಸಮಾಜ ನಿರ್ಮಿಸಬಲ್ಲರು. ಒಂದು ಉತ್ತಮ ಸಮಾಜ ನಿರ್ಮಾಣಕ್ಕೆ ಸಂಗೀತ ಜ್ಞಾನವು ಅಡಿಗಲ್ಲು ಎಂದು ಹೇಳಬಹುದು.

ಸಂಗೀತಕ್ಕೆ ಎಂಥ ಕಠಿಣ ಮತ್ತು ಕಠೋರ ಮನಸ್ಸಿನವರನ್ನು ಬದಲಿಸುವ ಶಕ್ತಿ ಇದೆ. ಜೈಲಿನಲ್ಲಿ ಸಂಗೀತ ಕಾರ್ಯಕ್ರಮಗಳನ್ನು ಖೈದಿಗಳಿಗಾಗಿ ಏರ್ಪಡಿಸುವುದನ್ನು ನಾನು ನೋಡುತ್ತಿದ್ದೇವೆ. ಮೈಸೂರು ಜೈಲಿನಲ್ಲಿ ಇಂತಹ ಕಾರ್ಯಕ್ರಮಗಳು, ಆಗಿಂದಾಗ್ಗೆ ನಡೆಯುತ್ತಿರುತ್ತವೆ. ಮಾನಸಿಕ ಪರಿವರ್ತನೆಗೆ ಸಂಗೀತ ಸಹಕಾರಿಯಾಗು ವುದರಲ್ಲಿ ಸಂಶಯವಿಲ್ಲ.

ಸಂಕ್ಷಿಪ್ತವಾಗಿ ಹೇಳುವುದಾದರೆ, ಮನಸ್ಸಿನ ದುಮ್ಮಾನ ವನ್ನು ಪರಿಹರಿಸಿಕೊಳ್ಳುವ ಸಾಧನ ಸಂಗೀತ, ದೈನಂದಿನ ಬದುಕಿನಲ್ಲಿ ಸಂತೋಷ ಮತ್ತು ನೆಮ್ಮದಿಯನ್ನು ಕೊಡುವ ಸಾಧನ ಸಂಗೀತ, ಜ್ಞಾನವನ್ನು ಹೆಚ್ಚಿಸಿಕೊಳ್ಳುವ ಸಾಧನ ಸಂಗೀತ, ನೈತಿಕ ಸ್ಥೈರ್ಯ, ಧೈರ್ಯ, ಆರೋಗ್ಯ ವೃದ್ಧಿಸಿ ಕೊಳ್ಳುವ ಸಾಧನ ಸಂಗೀತ. ಇಂತೆಲ್ಲಾ ಗಣಗಳಿರುವ ಸಂಗೀತದ ಅಭಿರುಚಿಯನ್ನು ಅಬಾಲವೃದ್ಧರಾಗಿ, ಲಿಂಗ ಭೇದವಿಲ್ಲದೆ ಎಲ್ಲರೂ ಸವಿಯಬಹುದು. ಬಾಹ್ಯ ಒತ್ತಡ ಗಳಿಗೆ ಸಿಕ್ಕಿ ನಲುಗುತ್ತಿರುವ ಇಂದಿನ ನಾಗರಿಕ ಪ್ರಪಂಚಕ್ಕೆ ಸಂಗೀತ ಅನಿವಾರ್ಯವಾಗಿದೆ.

**ಪ್ರೋತ್ಸಾಹ :**

ಆದಿಯಿಂದಲೂ ಸಂಗೀತ ಪ್ರಚಲಿತದಲ್ಲಿದೆ. ಇತಿಹಾಸದ ಪುಟವನ್ನು ತಿರುಚಿದರೆ ತಿಳಿಯಲಿದೆ ಅನೇಕರ ಹೆಸರುಗಳು. ತ್ಯಾಗರಾಜ, ಪುರಂದರದಾಸ, ಕನಕದಾಸರು ಆದಿಯಾಗಿ ಅನೇಕ ಸಾಧುಸಂತರು, ಶರಣರು, ವಿಭೂತಿ ಪುರುಷರು, ಸಂಗೀತಕ್ಕೆ ನೀರೆರೆದು ಪೋಷಿಸಿದರು.

ಸಂಗೀತಕ್ಕೆ ಮೂಲ ಶಿವ, ಅವನಿಂದ ಹೊರಟ ಓಂಕಾರ ನಾದವೇ ಸಂಗೀತದ ಬೇರು. ಅದಕ್ಕಾಗಿಯೇ, ಸಂಗೀತವನ್ನು ಒಂದು ದೇವ ಕಲೆ ಎಂದು ಕರೆಯಬಹುದು.

* ಮನೆ ನಂ.೭೮೮/೧೭೬, 'ಬಸವರಾಜ' ನಿಲಯ, ರಾಮಾನುಜ ರಸ್ತೆ, ಖಿಲ್ಲೆ ಮೊಹಲ್ಲಾ, ಮೈಸೂರು–೫೭೦ ೦೦೪.

ಭಾರತೀಯ ಸಂಸ್ಕೃತಿಯಲ್ಲಿ ಸಂಗೀತಕ್ಕೆ ಹೆಚ್ಚಿನ ಮನ್ನಣೆ ದೊರಕಿದೆ. ಈ ನೆಲದಲ್ಲಿ ಅನೇಕ ಸಂಗೀತ ವಿದ್ವಾಂಸರು ಹುಟ್ಟಿ ಗತಿಸಿ ಹೋಗಿದ್ದಾರೆ. ಅವರೆಲ್ಲರ ಕೊಡುಗೆ ಅಪಾರ. ಉದಾಹರಣೆಗೆ – ಶ್ರೀ ವಾಸುದೇವ ಚಾರ್ಯರು, ಶ್ರೀಮತಿ ಸುಬ್ಬಲಕ್ಷ್ಮಿಯವರು, ಶ್ರೀ ಚೌಡಯ್ಯನವರು, ಶ್ರೀ ಚಂಬೈ ವೈದ್ಯನಾಥ ಭಾಗವತರು, ವೀಣೆ ದೊರೆಸ್ವಾಮಿ ಐಯ್ಯಂಗಾರ್‌ರವರು, ವೀಣೆ ಶೇಷಣ್ಣನವರು ಮುಂತಾದವರು.

ಸಂಗೀತಕ್ಕೆ ಪ್ರೋತ್ಸಾಹ ನೀಡಿದವರಲ್ಲಿ ಈ ದೇಶದ ರಾಜ ಮಹಾರಾಜರು ಪ್ರಥಮ ಸ್ಥಾನದಲ್ಲಿದ್ದಾರೆ. ಇವರು ತಮ್ಮ ಆಸ್ಥಾನದಲ್ಲಿ ಸಂಗೀತಗಾರರಿಗೆ ಅವಕಾಶ ನೀಡಿ ಸಂಗೀತವನ್ನು ಗಗನದ ಎತ್ತರಕ್ಕೆ ಬೆಳೆಸಿದರು. ಮೈಸೂರು ರಾಜ ಮನೆತನದವರು ಸ್ವತಃ ಸಂಗೀತಾಭಿಮಾನಿಗಳು, ಅವರು ಸಂಗೀತಗಾರರಿಗೆ ತಮ್ಮ ಆಸ್ಥಾನದಲ್ಲೆ ಆಶ್ರಯ ನೀಡಿ ಅವರ ಪ್ರತಿಭೆಯನ್ನು ಹೊರತಂದವರು. ಹೀಗಾಗಿ, ಮೈಸೂರನ್ನು ಸಂಗೀತದವರು ಎಂತಲೂ ಕರೆಯಬಹುದು.

ಈ ನಿಟ್ಟಿನಲ್ಲಿ ಸುತ್ತೂರು ಶ್ರೀಮಠದ ಕೊಡುಗೆ ಅಪಾರ ಮತ್ತು ಶ್ಲಾಘನೀಯ. ಡಾ॥ ಶ್ರೀ ಶ್ರೀ ಶಿವರಾತ್ರಿ ರಾಜೇಂದ್ರಮಹಾಸ್ವಾಮಿಗಳಿಂದ ಸ್ಥಾಪಿತಗೊಂಡ ಸಂಗೀತ ಸಭಾ ಈಗ ಶ್ರೀಮಠದ ಜಗದ್ಗುರುಗಳಾದ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಸಂಗೀತ ಕಲಾಸೇವೆಗೆ ಇನ್ನೂ ಹೆಚ್ಚಿನ ಪ್ರೋತ್ಸಾಹ ನೀಡುತ್ತಾ ಬಂದಿದ್ದಾರೆ. ಹೀಗೆಯೇ, ಸಂಗೀತ ಕ್ಷೇತ್ರದಲ್ಲೇ ಶ್ರೀದತ್ತ ಪೀಠದ ಶ್ರೀ ಗಣಪತಿಸಚ್ಚಿದಾನಂದ ಮಹಾಸ್ವಾಮಿಗಳ ಕೊಡುಗೆಯೂ ಅಪಾರ ಮತ್ತು ಶ್ಲಾಘನೀಯ.

**ಶಿಕ್ಷಣ :**

ಸಂಗೀತದ ಗುಣಾತ್ಮಕ ಅಂಶಗಳನ್ನು ಕಂಡು ನಮ್ಮ ರಾಜ್ಯ ಸರ್ಕಾರ ಸಂಗೀತವನ್ನು ಡಿ.ಎಡ್. ಶಿಕ್ಷಣದ ಒಂದು ಭಾಗವೆಂದು ಪರಿಗಣಿಸಿವೆ. ಶಿಕ್ಷಕ ತರಬೇತಿ ಪಡೆಯುವ ಪ್ರತಿಯೊಬ್ಬರಿಗೂ ಸಂಗೀತ ಕಲಿಕೆಯನ್ನು ಕಡ್ಡಾಯ ಮಾಡಿದೆ. ಅದಕ್ಕಾಗಿ, ಸಂಗೀತ ಶಿಕ್ಷಕಿಯರನ್ನು ನೇಮಿಸಿಕೊಳ್ಳುವುದನ್ನು ಕಡ್ಡಾಯ ಮಾಡಿದೆ. ಇಲ್ಲಿಂದ ತರಬೇತು ಪಡೆದ ವಿದ್ಯಾರ್ಥಿಗಳು ಮುಂದೆ ಉಪಾಧ್ಯಾಯರಾಗಿ ಮಕ್ಕಳಿಗೆ ಶಾಲೆಯಲ್ಲೆ ಸಂಗೀತವನ್ನು ಕಲಿಸುವುದು ಸೂಕ್ತವೆಂದೇ ತಿಳಿದು ಡಿ.ಎಡ್‌ನಲ್ಲೇ ಸಂಗೀತ ಶಿಕ್ಷಣಕ್ಕೆ ಸರ್ಕಾರ ಒತ್ತು ನೀಡಿದೆ.

**ಮಾಧ್ಯಮಗಳು :**

ಈಗೀಗ ದೂರದರ್ಶನದ ವಿವಿಧ ಚಾನಲ್‌ಗಳಲ್ಲಿ ಸಂಗೀತಕ್ಕೆ ವಿಶೇಷ ಪ್ರಾಧಾನ್ಯತೆ ನೀಡುತ್ತಿರುವುದನ್ನು ಕಾಣುತ್ತೇವೆ. ಅದೇ ರೀತಿ ನಾಟಕರಂಗ, ಪತ್ರಿಕಾ ವಲಯ ಹಾಗೂ ಅನೇಕ ಸಂಘಸಂಸ್ಥೆಗಳು ಕೂಡ ಸಂಗೀತಕ್ಕೆ ಹೆಚ್ಚಿನ ಗಮನ ನೀಡಿ ಜನಮನ ಗೆದ್ದಿವೆ. ಒಂದು ವಿಷಾದದ ಸಂಗತಿ ಏನೆಂದರೆ ಈ ಕಲೆ ನಗರ ಮತ್ತು ಪಟ್ಟಣಗಳಲ್ಲಿ ಗಣನೀಯವಾಗಿ ಬೆಳೆಯುತ್ತಿದೆ. ಆದರೆ ಗ್ರಾಮ್ಯವಾಸಿಗಳಿಗೆ ಸಂಗೀತ ಇನ್ನೂ ಹತ್ತಿರವಾಗಿಲ್ಲ. ಆದ ಕಾರಣ ಸಂಗೀತ ಅವರಿಗೆ ತಲುಪುವ ಮಟ್ಟಿಗೆ ಮಾಧ್ಯಮಗಳು, ಸರ್ಕಾರ ಹಾಗೂ ಕಲಾಸಂಘಗಳು ವಿಶೇಷವಾಗಿ ಸ್ಪಂದಿಸಬೇಕಾಗಿವೆ.

**ಮುಕ್ತಾಯ :**

ಸಂಗೀತ ಒಂದು ದೇವಕಲೆ; ಅದು ಎಲ್ಲ ವರ್ಗದ ಎಲ್ಲ ಜನರ ಮನಮುಟ್ಟುವ ಕಲೆ ಮತ್ತು ನಶಿಸಿ ಹೋಗಲಾರದ ಕಲೆ. ಇಂಥಹ ಜೀವಕಲೆಯನ್ನು ಮತ್ತಷ್ಟು ಭದ್ರಗೊಳಿಸಿ ಸರ್ವಸುಖವನ್ನು ಪಡೆಯೋಣ.

ಸತ್ಯಂಶಿವಂ ಸುಂದರಂ.

❖

ವಿದ್ಯಾರ್ಥಿಗಳು ಕೆಟ್ಟರೆ, ತಪ್ಪು ಹಾದಿ ಹಿಡಿದರೆ ತಂದೆ ತಾಯಂದಿರು ಬೆವರು ಸುರಿಸಿ ದುಡಿದ ಹಣದ ವ್ಯಯ. ಜೊತೆಗೆ ಅಮೂಲ್ಯವಾದ ಕಾಲದ ವ್ಯಯವಾಗುತ್ತದೆ. ಇದರಿಂದ ನಿಮ್ಮ ಬದುಕು ಹಾಳಾಗುವುದಲ್ಲದೆ ವ್ಯಕ್ತಿ, ಸಂಸ್ಥೆ, ಸರ್ಕಾರ ನಿಮ್ಮಿಂದಾಗಿ ಆರ್ಥಿಕ, ಆಹಾರ, ನಿರುದ್ಯೋಗ ಮತ್ತಿತರ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಈ ವಿಚಾರವನ್ನು ಗಂಭೀರವಾಗಿ ಯೋಚಿಸಿ ಮುನ್ನಡೆಯಬೇಕು. ಆದರೆ ಅದರ ದುಷ್ಪರಿಣಾಮ ಅತ್ಯಂತ ದೊಡ್ಡದು. ದೊಡ್ಡ ಸೇತುವೆಯಲ್ಲಿ ಕಲ್ಲೊಂದನ್ನ ಕಿತ್ತಾಗ ಉಂಟಾಗುವ ನಾಶದಷ್ಟೇ ಮಹತ್ವದ್ದು.

–ಶ್ರೀವಾಣಿ







# ಚತುರತೆಯಿಂದ ಮರುಳುಮಾಡಿ ಉದರವ ಹೊರೆದವರು ಹಿರಿಯರಲ್ಲ

–ಸ.ರಾ. ಸುಳಕೂಡೆ *

ಶರಣರ ಬದುಕಿನ ಪ್ರತಿಹೆಜ್ಜೆಯು ಸ್ವಾವಲಂಬನೆಯ ಮುನ್ನೆಜ್ಜೆಯೇ ಆಗಿದೆ. ಶರಣರು ಪದವಿ–ಪಟ್ಟ–ಹುದ್ದೆ–ಪ್ರಸಿದ್ಧಿ ಎಂದು ಕಿತ್ತಾಡಲಿಲ್ಲ. ಸಾಂಘಿಕ ಬದುಕಿಕೊಂಡು ವಿಶ್ವಮಾನವ ಉದಾಹರಣೆಯಾಗಿರುವ ಶರಣ ಸಂಸ್ಕೃತಿಯು ಸಮಾನತೆಯ ಮೂಲಕ ಮಾನವೀಯತೆಗೆ ಬಲವನ್ನು ಇಂದಿಗೂ ತುಂಬುತ್ತಲಿದೆ. ಪರಾವಲಂಬಿ ಬದುಕನ್ನು ಪರಿಣಾಮಕಾರಿಯಾಗಿ ನಿವಾರಿಸಿಕೊಂಡು ದಾಸೋಹ ಮತ್ತು ಅನುಭಾವದ ಬದುಕನ್ನು ರೂಢಿಸಿಕೊಂಡಿದ್ದ ಶರಣರು ಕಾಯಕವೇ ಕೈಲಾಸವೆಂದು ಬದುಕಿದವರು. ಅರಿವೇ ಗುರುವೆಂದು ಸಾಧಿಸಿ ತೋರಿಸಿದ ಅವರು ಆರಾಧನೆಯಲ್ಲೂ ಸ್ವಾವಲಂಬಿತನ ತಂದುಕೊಂಡಿದ್ದು ಸದಾಭಿಮಾನದ ಸಂಗತಿಯಾಗಿದೆ. ಶರಣರು ವೈಭವ ಬದುಕಿನೊಂದಿಗೆ ಬಹುದೂರ ನಿಂತುಕೊಂಡಿದರಲ್ಲದೆ ಶ್ರಮ ಸಂಸ್ಕೃತಿಯನ್ನು ಬೆಳೆಸಿಕೊಂಡಿದ್ದರಿಂದ ಹಿರಿತನ–ಕಿರಿತನದ ಗೊಂದಲಕ್ಕೆ ಸಿಲುಕಿಕೊಳ್ಳಲಿಲ್ಲ. ಮತ್ತೊಬ್ಬರದನ್ನು ಬಳಸಿಕೊಳ್ಳಲು ಮುಂದಾಗಲಿಲ್ಲ. ಶರಣ ಸಂಸ್ಕೃತಿಯು 'ಉಪದೇಶ' ಸಂಸ್ಕೃತಿಯನ್ನು ಅಳಿಸುವಲ್ಲಿ ಶ್ರಮಿಸಿತ್ತೋ ಅಷ್ಟೇ ಪ್ರಬಲವಾಗಿ ಮಂತ್ರ–ತಂತ್ರ–ಯಜ್ಞ–ಯಾಗಾದಿ–ಸಿದ್ಧಿ ಎಲ್ಲವನ್ನೂ ಕಿತ್ತೊಗೆಯುವ ಶಕ್ತಿಯನ್ನು ತುಂಬಿತು. ಕಂದಾಚಾರ–ಕುಲಾಚಾರದಿಂದ ಅತೀತರಾಗಿ ಬದುಕಿದ ಶರಣರು ಹಿರಿತನದ ಗೊಂದಲವನ್ನು ಸರಳವಾಗಿ ಬಿಡಿಸಿಕೊಂಡಿದ್ದರು.

*'ತನ್ನನಿಕ್ಕಿ ನಿಧಾನವ ಹಿಂಡು ತರುವಿಂಧ್ಯದಲ್ಲಿ*
*ಕೂಡಿರವೆ? ನರವಿಂಧ್ಯದಲ್ಲಿ ಕೂಡಿರವೆ?*
*ತಮ್ಮ ತಮ್ಮ ಕತ್ತಲೆಯ ಹರಿಯದೆ, ಇದಿರಿಂಗೆ*
*ಬುದ್ಧಿಯ ಹೇಳಿ ಲೋಗರ ಮಕ್ಕಳನಿಕ್ಕಿ ನೆಲೆಯ*
*ನೋಡಿಹೆನೆಂದಡೆ ಅದೆಂದು ಸಾಧ್ಯವಪ್ಪನಯ್ಯ*
*ನಮ್ಮಕೂಡಲಚನ್ನಸಂಗಮದೇವ?'*

ಜಗದ ಮಾನವನ ವ್ಯವಹಾರಗಳು ಬಲು ವಿಚಿತ್ರವೇ ಆಗಿವೆ. ಯಾವುದಕ್ಕೂ ನೀತಿ–ನಿಯತ್ತು ಪಾಲಿಸುವ ವ್ಯವಧಾನವಿಲ್ಲದಾಗಿದೆ. ಗುಂಪು–ಗುಂಪಾಗಿ ಗುಂಪುಗಾರಿಕೆಯನ್ನೇ ಬಂಡವಾಳವನ್ನಾಗಿ ಮಾಡಿಕೊಂಡು ಸ್ವಾರ್ಥ ಸಾಧಿಸುವ ಸಂಗತಿಗಳೇ ಒಂದು ಮೇಲುಗೈ ಸಾಧಿಸುತ್ತಲಿವೆ. ಇದು ಆರೋಗ್ಯಕರ ಸಮಾಜ ನಿರ್ಮಾಣಕ್ಕೆ ಬಾಧಕವೇ ಆಗಿದೆ. ಇದಲ್ಲದೆ ನೈಜ ಹಿರಿತನವನ್ನು ಅಂದಗೆಡಿಸಿದೆ.

ಶರಣ ಸಂಸ್ಕೃತಿಯು ಒಡೆದುಹೋದ ಸಮಾಜಗಳನ್ನು ಒಗ್ಗೂಡಿಸಿದ ಅಂಶಗಳು ಹಿರಿತನಕ್ಕೊಂದು ಚೇತನಶಕ್ತಿಗಳಾಗಿವೆ. ಪರಾವಲಂಬತೆ ಕೇವಲ ಆರ್ಥಿಕ ಮಟ್ಟದೊಳಗೆ ಕಳೆದುಕೊಳ್ಳದೇ ವಿಚಾರದಲ್ಲೂ ಸ್ವಾತಂತ್ರ್ಯ ಉಳಿಸಿಕೊಂಡ 'ಶರಣ ಸಂಸ್ಕೃತಿಯ ಹಿರಿತನಕ್ಕೆ 'ಮಹಾಮನೆ' ಅನುಭವ ಮಂಟಪ ಇಂದಿಗೂ ಪ್ರಸ್ತುತತೆ ಉಳಿಸಿಕೊಂಡಿವೆ. ಸತ್ಸಂಗವನ್ನೇ ಹಿರಿತನಕ್ಕೆ ಬಳಸಿಕೊಂಡಿದ್ದ ಶರಣರು ತಮ್ಮ ತಮ್ಮ ಕತ್ತಲೆಯನ್ನು ಕಳೆದುಕೊಂಡು ಆಚಾರವೇ ಸ್ವರ್ಗ, ಅನಾಚಾರವೇ ನರಕ, ಅಯ್ಯಾ ಎಂದೊಡೆ ಸ್ವರ್ಗ, ಎಲವೋ ಎಂದಡೆ ನರಕ, ದಯವೇ ಧರ್ಮವೆಂದು ಬದುಕಿ ತೋರಿಸಿದ್ದಾರೆ. ಅವರ ನಡೆ–ನುಡಿಯೊಳಗೆ ನೆಚ್ಚಿ ನಡೆಯುವುದೇ ಹಿರಿತನದ ಹೆಗ್ಗುರುತಾಗಿದೆ.

❖

* ೧೩೧೯, ರಾಮತೀರ್ಥನಗರ, ಬೆಳಗಾವಿ –೫೯೦ ೦೧೬.

ಜನಗಳು ಮೊದಲು ತಮ್ಮ ಕರ್ತವ್ಯವನ್ನು ಚೆನ್ನಾಗಿ ಮಾಡುವ ಮನೋಭಾವ ಬೆಳೆಸಿಕೊಳ್ಳಬೇಕು. ತಮಗೆ ಅನ್ಯಾಯವಾದುದನ್ನು ಪ್ರತಿಭಟನೆ ಮಾಡಲು ಶಕ್ತಿ ಬೆಳೆಸಿಕೊಳ್ಳಬೇಕು. ತಮಗೇನು ಸೌಲಭ್ಯ ದೊರೆಯಬೇಕೋ ಅದನ್ನು ಹೋರಾಟ ಮಾಡಿ ಪಡೆದುಕೊಳ್ಳಬೇಕು.

–ಶ್ರೀವಾಣಿ

## ದ್ವಿದಳ ಧಾನ್ಯಗಳು – ಬೇಳೆ ಕಾಳುಗಳು

–ವಾಮನರಾವ್ ಹೊದಿಕೆ *

ದ್ವಿದಳ ಧಾನ್ಯಗಳಲ್ಲಿ ಪ್ರೋಟೀನ್ ಹೆಚ್ಚು ಇರುತ್ತದೆ. ಅದು ಶಕ್ತಿವರ್ಧಕ. ಹಾಲು ಹೈನ ಸೇವಿಸದವರಂತೂ ಪ್ರತಿದಿನ ದ್ವಿದಳ ಧಾನ್ಯ ಸೇವಿಸಲೇಬೇಕು. ಇವು ಅಕ್ಕಿ, ಗೋದಿ ಮೊದಲಾದ ಏಕದಳ ಧಾನ್ಯಗಳಿಗಿಂತ ರುಚಿಯಾಗಿಯೂ ಇರುತ್ತವೆ. ಮೊಳಕೆ ತರಿಸಿ ತಿನ್ನಲಿಕ್ಕೆ ಇವೇ ಹೆಚ್ಚು ಅನುಕೂಲ. ಇವು ಅನೇಕ ಪ್ರಕಾರದವು ಇದ್ದು ಪ್ರತಿಯೊಂದರ ಬಣ್ಣ ಹಾಗೂ ಗುಣ ಬೇರೆ ಬೇರೆ ಇರುತ್ತದೆ.

ಹೆಸರು, ಮಡಕಿ, ತೊಗರಿ, ಕಡ್ಲೆ, ಹುರಳಿ, ಉದ್ದು, ಅವರೆ, ಅಲಸಂದಿ, ಬಟಾಣಿ ಮೊದಲಾದವು.

ದ್ವಿದಳ ಧಾನ್ಯಗಳಲ್ಲಿ ಹೆಸರೇ ಶ್ರೇಷ್ಠ. ಬೇಗ ಜೀರ್ಣವಾಗುತ್ತದೆ. ರೋಗಿಗಳಿಗೂ ಪಥ್ಯಕರ. ಮೊಳಗೆ ತೆಗೆದು ತಿನ್ನಲಿಕ್ಕೂ ತುಂಬಾ ರುಚಿಕರ. ಮಡಿಕೆಕಾಳು ಸಹ ಹೆಚ್ಚು ಕಡಿಮೆ ಇದರಂತೆಯೇ.

ತೊಗರಿಯಲ್ಲಿ ವಿಶಿಷ್ಟ ರುಚಿ ಇರುತ್ತದೆ ಹಾಗೂ ಹೆಚ್ಚು ಪುಷ್ಟಿಕರ ಎಂಬುದೂ ನಿಜ. ಆದರೆ ಪಚನಕ್ಕೆ ಜಡ. ಬೇಯುಲು ತಡ. ಸಾಮಾನ್ಯ ವಾಗಿ ಬೇಳೆಯು ರೂಪದಲ್ಲಿಯೇ ಸೇವಿಸಲಾಗುತ್ತದೆ. ಇದರಿಂದ ಕೆಲವು ಸತ್ವ ಕಡಿಮೆಯಾಗಿರುತ್ತದೆ. ಆರೋಗ್ಯವಂತರೂ ಶ್ರಮಜೀವಿಗಳೂ ಮಾತ್ರ ಇದನ್ನು ಸೇವಿಸಬಹುದು.

ಕಡ್ಲೆಯು ಪುಷ್ಠಿಕರ, ಶಕ್ತಿವರ್ಧಕ, ಆದ್ದರಿಂದಲೇ ಕುದುರೆಗೆ ಕಡ್ಲೆ ತಿನ್ನಿಸುತ್ತಾರೆ. ಪೈಲವಾನರು ಕಡ್ಲೆ ನೆನಿಸಿ ತಿನ್ನುತ್ತಾರೆ. ವಾತಕರ, ಜೀರ್ಣವಾಗಲು ಜಡ.

ಹುರುಳಿಯೂ ತುಂಬಾ ಶಕ್ತಿವರ್ಧಕ. ಆದ್ದರಿಂದಲೇ ಎತ್ತುಗಳಿಗೆ ಹುರುಳಿ ಬೇಯಿಸಿ ತಿನ್ನಿಸುತ್ತಾರೆ. ಹುರುಳಿ ಬೇಯಿಸಿದ ನೀರು, ಹುರುಳಿ ಕಟ್ಟು, ತುಂಬಾ ಹಿತಕರ. ಪಚನಕ್ಕೆ ಸ್ವಲ್ಪ ಜಡ.

ಉದ್ದು ಎಲ್ಲಕ್ಕೂ ಪುಷ್ಟಿಕರ. ಶಕ್ತಿವರ್ಧಕ. ಮಾಂಸದಲ್ಲಿರುವ ಯಾವತ್ತೂ ಸತ್ವಾಂಶ ಇದರಲ್ಲೂ ಇರುತ್ತದೆ. ಉದ್ದಿನ ಹಿಟ್ಟನ್ನು ಸಾಮಾನ್ಯವಾಗಿ ಅಕ್ಕಿ ಮೊದಲಾದ ಇತರ ಧಾನ್ಯಗಳೊಡನೆ ಕೂಡಿಸಿಯೇ ಉಪಯೋಗಿಸುತ್ತಾರೆ. ಇಡ್ಲಿ, ದೋಸೆ, ಹಪ್ಪಳ, ಸಂಡಿಗೆ ಮೊದಲಾದವುಗಳಿಗೆ ಇದನ್ನು ಬಳಸುವುದು ಹೆಚ್ಚು.

ಸೋಯಾಬೀನ್ ಎಂಬುದು ಅಸಾಮಾನ್ಯವಾದ ಗುಣಗಳಿಂದ ತುಂಬಿದೆ. ಅನೇಕ ವಿಧಗಳಲ್ಲಿ ಸೇವಿಸಬರುತ್ತದೆ. ಆದರೆ ನಮ್ಮ ಈ ಭಾಗದಲ್ಲಿ ಇನ್ನೂ ಪ್ರಚಾರದಲ್ಲಿ ಬಂದಿಲ್ಲ.

ದ್ವಿದಳ ಧಾನ್ಯಗಳನ್ನು ಒಡೆದು ಬೇಳೆ ಮಾಡಿ ತಿನ್ನುವ ವಾಡಿಕೆ ಹೆಚ್ಚು. ಆದರೆ ಇಡಿಯಾಗಿಯೇ ಸೇವಿಸುವುದು ಹೆಚ್ಚು ಲಾಭಕರ. ಬೇಳೆ ಮಾಡಿದರೂ ಸೊಪ್ಪೆ ಸಹಿತ ತಿಂದರೆ ಅಡ್ಡಿಯಿಲ್ಲ. ಇಲ್ಲವಾದರೆ ಪ್ರಾಮುಖ್ಯವಾದ ಸತ್ವಾಂಶಗಳೆಷ್ಟೋ ಬೀಜಾಂಕುರ ಹಾಗೂ ಸಿಪ್ಪೆ ಯೊಂದಿಗೆ ಹೊರಟು ಮಾಗುತ್ತವೆ.

ಕಡ್ಲೆ ಹುರಿದು ಹುರಕಡ್ಲೆ, ಪುಟಾಣಿ ಮಾಡುತ್ತಾರೆ. ಇದರಂತೆ ಶೇಂಗಾ ಕಾಳುಗಳನ್ನು ಷಹ ಹುರಿದು ತಿನ್ನುತ್ತಾರೆ. ಇಂಥ ಹುರಿದ ಕಾಳುಗಳ ಮೇಲಿನ ಸಿಪ್ಪೆಯಲ್ಲಿ ಯಾವುದೇ ಸತ್ವ ಉಳಿದಿರುವುದಿಲ್ಲ. ಆದ್ದರಿಂದ ಅವುಗಳ ಸಿಪ್ಪೆಯನ್ನು ತೆಗೆದೇ ತಿನ್ನಬಹುದು.

ಬೇಳೆಕಾಳುಗಳನ್ನು ಒಡೆದು, ಹೊಟ್ಟು ಹಾರಿಸಿ ಸ್ವಚ್ಛವಾದ ಬೇಳೆಯನ್ನಾಗಿ ಮಾಡಿ ಉಪಯೋಗಿಸುವ ಪ್ರಘಾತವೇ ಹೆಚ್ಚು. ಇದು ತಪ್ಪು.

ಇಡೀ ಕಾಳಿಗೆ ಬೇಗನೆ ಹುಳ ಹಿಡಿಯುತ್ತವೆ. ಆದರೆ ಬೇಳೆಗೆ ಹುಳ ಹಿಡಿಯುವುದು ಕಡಿಮೆ. ಇದರ ಮೇಲಿಂದ ಬೇಳೆಯಲ್ಲಿ ಕ್ರಿಮಿಗಳಿಗೆ ಸಹಜವಾಗಿ ಸಿಗುವ ಪೋಷಕಾಂಶಗಳು ಇರುವುದಿಲ್ಲ. ಸಿಪ್ಪೆಗೂಡಿದ ಕಾಳಿನಲ್ಲೇ ಇರುತ್ತವೆ. ಆದ್ದರಿಂದಲೇ ಬೇಳೆಗಿಂತ ಬೇಳೆಯ ಕಾಳೇ ಹೆಚ್ಚು ಆರೋಗ್ಯಕರವಾಗಿರುತ್ತದೆ. ಮೊಳಕೆ ಬರಿಸಿದ ರಂತೂ ಇನ್ನೂ ಹೆಚ್ಚು ಪೋಷಕಾಂಶಗಳನ್ನು ಪಡೆಯುತ್ತದೆ.

–ಮುಂದುವರಿಯುತ್ತದೆ.

* ನಿಸರ್ಗ ಚಿಕಿತ್ಸಾ ಸಮಿತಿ. ಬೆಂಗೇರಿ, ಹುಬ್ಬಳ್ಳಿ





## ತೀವ್ರರೋಗಗಳಲ್ಲಿ ನಿಸರ್ಗೋಪಚಾರ

–ಜಿ.ವಿ. ವೆಂಕಟನಾರಾಯಣ ಶಾಸ್ತ್ರಿ *

### ಸೀತಾಳ ಸಿಡುಬು (Chicken Pox)

ಇದೂ ಸಹ ಮುಖ್ಯವಾಗಿ ಮಕ್ಕಳ ರೋಗವೇ. ಎಲ್ಲೋ ಒಮ್ಮೊಮ್ಮೆ ದೊಡ್ಡವರಲ್ಲಿಯೂ ಕಾಣಿಸಿಕೊಳ್ಳುವ ಸಾಧ್ಯತೆ ಉಂಟು.

**ಲಕ್ಷಣಗಳು :** ಇದೂ ಸಹ ದಡಾರದಂತೆಯೇ ಬರುವುದು. ಅದರಲ್ಲಿ ರವೆಯಂತಹ ಸಣ್ಣ ಸಣ್ಣ ಗುಳ್ಳೆಗಳಾದರೆ, ಇದರಲ್ಲಿ ದಪ್ಪ ದಪ್ಪ ಬೊಕ್ಕೆಗಳು ಅಥವಾ ಹೊಪ್ಪಳೆಗಳು ಏಳುವುವು. ಜ್ವರ ಬಂದ ನಂತರವೇ ಬೊಕ್ಕೆಗಳು ಏಳಲು ಪ್ರಾರಂಭವಾಗುವುವು. ಒಮ್ಮೆ ಕೆಲವು ಎದ್ದು ಒಣಗಿದ ನಂತರ ಮತ್ತೆ ಕೆಲವು ಏಳುವುವು. ಹೀಗೆ ಕೆಲವು ದಿನಗಳು ಏಳುತ್ತಲೇ ಇದ್ದು ಮಗ್ಗುತ್ತಲೇ ಇರುವುವು.

**ನಿಸರ್ಗೋಪಚಾರ :** ಶರೀರದ ಉಪಚಾರವೇ ಇದಕ್ಕೂ ಆಗಬೇಕು. ಬೊಕ್ಕೆಗಳ ಮೇಲೆ ತಣ್ಣೀರು ಬಟ್ಟೆಯನ್ನು ಹಾಕುತ್ತಲೇ ಇರಬೇಕು.

**ಮನೆಮದ್ದು :** ಬೇವಿನ ಸೊಪ್ಪನ್ನು ಅರೆದು, ಶುದ್ಧವಾದ ಅರಿಶಿನ ಪುಡಿಯೊಂದಿಗೆ ಬೆರೆಸಿ, ಒಳ್ಳೆಯ ಕೊಬ್ಬರಿ ಎಣ್ಣೆಯಲ್ಲಿ ಕಲೆಸಿ ಬೊಕ್ಕೆಗಳಿಗೆ ಹಚ್ಚಬೇಕು.

### ಸಿಡುಬು (Small Pox)

ಇದೂ ಭಯಾನಕ ಅಂಟು ಜಾಡ್ಯ. ಲಕ್ಷಾಂತರ ಜನಗಳನ್ನು ಬಲಿ ತೆಗೆದುಕೊಂಡಿದೆ. ಹಿಂದಿನವರು ಇದನ್ನು 'ದೊಡ್ಡಮ್ಮ' ಎಂದು ಕರೆಯುತ್ತಿದ್ದರು. ಈಗ ಇದನ್ನು ಲಸಿಕೆಯಿಂದ ನಿರ್ನಾಮ ಮಾಡಲಾಗಿದೆಯೆಂದು ಹೇಳಲಾಗಿದೆ ಆದರೂ ಒಮ್ಮೊಮ್ಮೆ ತಲೆಯೆತ್ತುತ್ತಿರುವುದನ್ನು ಕಾಣಬಹುದು. ಹಿಂದೆ ಈ ರೋಗ ಬರುತ್ತಿದ್ದಾಗಲೂ ಎಲ್ಲರಿಗೂ ಬಂದಿಲ್ಲ, ಹಾಗೂ ಬಂದವರೆಲ್ಲರೂ ಸತ್ತಿಲ್ಲ. ಅಂದರೆ ರೋಗ ನಿರೋಧಕ ಶಕ್ತಿಯಿದ್ದವರಿಗೆ ಬಂದಿಲ್ಲ. ಬಂದಿದ್ದರೂ ಗುಣ ಮುಖವಾಗಿದೆ. ಅಂದರೆ ನೈಸರ್ಗಿಕ ರೋಗ ನಿರೋಧಕ ಶಕ್ತಿ ಅಥವಾ ಹೆಚ್ಚು ಜೀವಶಕ್ತಿ ನಮ್ಮ ಬೇಡಿಕೆ. ಅದಕ್ಕಾಗಿ ನಿಸರ್ಗಜೀವನದ ಬಳಕೆ. ಸದಾ ಒಳಗಿನ ಹೊರಗಿನ ಶುಚಿತ್ವದ ಕಡೆಗೆ ಗಮನ.

**ಲಕ್ಷಣಗಳು :** ಒಮ್ಮೆಗೆ 104°F ಅಥವಾ ಅದಕ್ಕಿಂತ ಹೆಚ್ಚು ಜ್ವರ ಬರುವುದು. ನಡುಕ, ಭಯಂಕರ ಬಾಯಾರಿಕೆ, ವಾಂತಿ, ತೀವ್ರ ತಲೆನೋವು ಇತ್ಯಾದಿ. ಇದೂ ಸಹ ಮಕ್ಕಳಲ್ಲಿಯೇ ಹೆಚ್ಚು

ಸೀತಾಳ ಸಿಡುಬಿನಲ್ಲಿ ಒಂದು ಸಲಕ್ಕೆ ಒಂದೆರಡು ಗುಳ್ಳೆಗಳೇಳುತ್ತವೆ. ಆದರೆ ಸಿಡುಬಿನಲ್ಲಿ ಅದಕ್ಕಿಂತ ಹೆಚ್ಚು ದಪ್ಪ ಬೊಕ್ಕೆಗಳು ಮೈತುಂಬಾ ಕಾಣಿಸಿಕೊಳ್ಳುವುವು. ಸುಟ್ಟ ಬೊಕ್ಕೆಯಂತೆ ಕಾಣುವ ಇವು ನಿಧಾನವಾಗಿ ಗಟ್ಟಿಯಾಗಿ ಕಡೆಗೆ ಕೀವು ತುಂಬುವುವು. ವಾಸಿಯಾಗುವ ಹಂತದಲ್ಲಿ ವಿಪರೀತ ನವೆ. ಕನ್ನಡಿಯಲ್ಲಿ ಮುಖ ನೋಡಿಕೊಂಡಾಗಲೆಲ್ಲಾ ಅದರ ನೆನಪು ಬರುವುದು. ಕೆಲವೊಮ್ಮೆ ಕನ್ನಡಿಯನ್ನು ನೋಡಿಕೊಳ್ಳಲೂ ಸಾಧ್ಯವಿಲ್ಲದಂತೆ ಎರಡೂ ಕಣ್ಣುಗಳನ್ನು ಕುರುಡು ಮಾಡಿಬಿಡಬಹುದು.

**ಕಾರಣ :** ಹೊರಗಿನ, ಒಳಗಿನ ಅಶುಚಿತ್ವವೇ ಮೊದಲ ಕಾರಣ. ಕ್ರಿಮಿ ಮುಂತಾದುವು ಎರಡನೇ ಕಾರಣ.

**ನಿಸರ್ಗೋಪಚಾರ :** ಜ್ವರದಲ್ಲಿ ಮಾಡುವ ಉಪಚಾರವನ್ನೇ ಇದಕ್ಕೂ ಮಾಡಬೇಕು. ಶರೀರದಲ್ಲಿ ಗುಳ್ಳೆಗಳಿರುವುದರಿಂದ ಬಹಳ ಎಚ್ಚರಿಕೆಯಿಂದ ಸ್ನಾನ ಮಾಡಿಸಬೇಕು. ಗುಳ್ಳೆಗಳಿಗೆ ಆಲೀವ್ ಎಣ್ಣೆಯನ್ನು ಹಚ್ಚುವುದು ಒಳ್ಳೆಯದು. ಅದಿಲ್ಲದಿದ್ದಾಗ ಕೊಬ್ಬರಿ ಎಣ್ಣೆಯನ್ನೇ ಹಚ್ಚಿ, ಬೇವಿನ ಸೊಪ್ಪನ್ನು ಅರೆದು ಅದಕ್ಕೆ ಒಳ್ಳೆಯ ಅರಿಶಿನಪುಡಿ ಹಾಕಿ ಕಲೆಸಿ ಹಚ್ಚಬೇಕು. ಅದನ್ನು ಕಡಲೇಹಿಟ್ಟಿನಿಂದ ತೊಳೆಯಬೇಕು. ಸೀಗೇಪುಡಿ, ಸೋಪ್ ಇತ್ಯಾದಿಗಳನ್ನು ಬಳಸಬಾರದು. ಗುಳ್ಳೆಗಳನ್ನು ಕೆರೆಯದಂತೆ ನೋಡಿಕೊಳ್ಳಬೇಕು. ಕೆರೆದರೆ ಗಾಯಗಳು ದೊಡ್ಡವಾಗುತ್ತವೆ ಹಾಗೂ ಕಲೆ ಹಾಗೇ ಉಳಿಯುತ್ತದೆ. ಅಲ್ಲದೆ ಗುಳ್ಳೆಗಳು ಹೆಚ್ಚುತ್ತವೆ. ತುಂಬಾ ತಾಳ್ಮೆಯಿಂದ, ಧೈರ್ಯದಿಂದ ಉಪಚರಿಸಬೇಕು.

**ಡಿಫ್ತೀರಿಯಾ :**

ಇದನ್ನು ಲಸಿಕೆಯಿಂದ ಹೊಡೆದೋಡಿಸುವ ಕ್ರಮ ಜಾರಿಗೆ ಬಂದಿದೆ. ಲಸಿಕೆಯ ಬಗ್ಗೆ ಈ ಹಿಂದೆ ಹೇಳಿಯಾಗಿದೆ.

* 'ನಿಸರ್ಗ ಯೋಗಧಾಮ' ನಂ. ೨/೨೦೫೫, ೧೧ನೇ ಕ್ರಾಸ್, ಎಸ್.ಎಸ್.ಪುರಂ, ತುಮಕೂರು –೫೭೨ ೧೦೨.

ಅದಕ್ಕಿಂತ ನೈಸರ್ಗಿಕ ಜೀವನಕ್ರಮಕ್ಕೆ ಒತ್ತು ಕೊಡುವುದು ಉತ್ತಮ. ಇದೂ ಸಹ ಹೆಚ್ಚಾಗಿ ಮಕ್ಕಳನ್ನು ಕಾಡುವ ರೋಗ.

**ಲಕ್ಷಣಗಳು :** ಅತಿಯಾದ ಜ್ವರ ಮತ್ತು ಗಂಟಲುನೋವು ಇದರ ಮೊದಲ ಗುರುತು. ಗಂಟಲಿನಲ್ಲಿ ಬಿಳಿಯ ಪೊರೆಯು ಬೆಳೆಯುತ್ತಾ ಹೋಗುತ್ತದೆ. ಕತ್ತಿನ ಗ್ರಂಥಿಗಳು ದೊಡ್ಡ ವಾಗುತ್ತವೆ. ಇದು ಪ್ರಾಣಾಂತಿಕವಾಗಬಹುದಾದ ಕಾಯಿಲೆ.

**ಕಾರಣ:** ತಪ್ಪಾದ ಆಹಾರಾಭ್ಯಾಸ, ಅನಾರೋಗ್ಯಕರ ಜೀವನ, ನಿರಂತರ ಮಲಬದ್ಧತೆ.

**ನಿಸರ್ಗೋಪಚಾರ :** ಜ್ವರಕ್ಕೆ ನೀಡುವ ಉಪಚಾರವನ್ನೇ ಇದಕ್ಕೂ ನೀಡಬೇಕು. ಜತೆಗೆ ಕುತ್ತಿಗೆಗೆ ಎರಡು ಗಂಟೆಗೊಮ್ಮೆ 30 ನಿಮಿಷಗಳ ಕಾಲ ತಣ್ಣೀರಿನ ಪಟ್ಟಿಯನ್ನು ಹಾಕಬೇಕು. ಬಿಸಿನೀರಿನ ಪಾದಸ್ನಾನ ದಿನಕ್ಕೆ ಎರಡು ಸಲ ಮಾಡಿಸಬೇಕು.

-ಮುಂದುವರಿಯುತ್ತದೆ.

## ಶ್ರೀವಾಣಿ

ಬಸವಣ್ಣನವರ ಪ್ರಪಂಚ ವಿಶ್ವಪ್ರಪಂಚ. ಮರ್ತ್ಯಲೋಕ ಮಾಯೆಯಲ್ಲ; ಕರ್ತಾರನ ಕಮ್ಮಟ. ಜಗತ್ತು ಮಹಾಶಕ್ತಿಯಿಂದ ವ್ಯಾಪಕವಾಗಿದೆ. ಜೀವನ ಸೌಕರ್ಯಗಳು ಬೇಕು. ಬಸವಣ್ಣನವರು ಮಾಡಿದ ಬಹುದೊಡ್ಡ ಸಾಮಾಜಿಕ ಪರಿವರ್ತನೆಯೆಂದರೆ ದುಡಿದು ಉಣ್ಣುವ ಸಂಸ್ಕೃತಿಯನ್ನು ನಿರ್ಮಾಣ ಮಾಡಿದ್ದು. ಬಸವತತ್ತ್ವಗಳು ಜಗತ್ತಿನ ಸಮಸ್ಯೆಗಳಿಗೆ ಪರಿಹಾರ ಕೊಡಬಲ್ಲವು. ಅವುಗಳನ್ನು ನಾವು ಆಚರಣೆಗೆ ತರಬೇಕು. ಅದರಿಂದ ನೆಮ್ಮದಿ.

RNI No. 17139/69 "Siddaganga" Monthly - Postal Reg. No. KA/SK/TMR/385/2009-11



ತುಮಕೂರು ಮರ್ಚೆಂಟ್ಸ್ ಸೌಹಾರ್ದ ಕ್ರೆಡಿಟ್ ಕೋ-ಆಪರೇಟಿವ್ ಬ್ಯಾಂಕು ಏರ್ಪಡಿಸಿದ್ದ ಸಮಾರಂಭವನ್ನು ಪೂಜ್ಯ ಶ್ರೀಗಳವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಬ್ಯಾಂಕಿನ ಅಧ್ಯಕ್ಷ ಶ್ರೀ ಎನ್.ಎಸ್. ಜಯಕುಮಾರ್ ಹಾಗೂ ಪದಾಧಿಕಾರಿಗಳು ಉಪಸ್ಥಿತರಿದ್ದರು



ಮೈಸೂರು ಬ್ಯಾಂಕಿನ ನಿವೃತ್ತ ಅಧಿಕಾರಿ ಶ್ರೀ ಕೊಪ್ಪಲ್ ನಾಗರಾಜು ಅವರಿಗೆ ತುಮಕೂರಿನಲ್ಲಿ ಏರ್ಪಡಿಸಿದ್ದ ಅಭಿನಂದನಾ ಸಮಾರಂಭವನ್ನು ಪೂಜ್ಯ ಶ್ರೀ ಶ್ರೀಗಳು ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಸಂಸದರು, ಗಣ್ಯರು ಉಪಸ್ಥಿತರಿದ್ದರು.



ತುಮಕೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ನಡೆದ ವೇದಾಂತ ಸಾಮಗ್ರ ಅಧ್ಯಯನ ಸಮ್ಮೇಳನದಲ್ಲಿ ಸೌಂದರ್ಯಲಹರೀ ಉದ್ಘಾಟನಾ ಸಮಾರಂಭವನ್ನು ಎಡತೊರೆ ಶ್ರೀ ಶ್ರೀ ಶಂಕರ ಭಾರತೀ ಸ್ವಾಮೀಗಳು, ಶ್ರೀ ಶ್ರೀ ವೀರೇಶಾನಂದ ಸ್ವಾಮಿಗಳವರ ಸಮ್ಮುಖದಲ್ಲಿ ಪೂಜ್ಯ ಶ್ರೀ ಶ್ರೀಗಳವರು ಉದ್ಘಾಟಿಸಿದರು.




ತುಮಕೂರು ವಿ.ವಿ.ಯಲ್ಲಿ ಏರ್ಪಡಿಸಿದ್ದ ಬಸವ ತತ್ತ್ವ ಅಧ್ಯಯನ ಕೇಂದ್ರ ಉದ್ಘಾಟನೆ ಮತ್ತು ವಿಶೇಷ ಉಪನ್ಯಾಸ ಕಾರ್ಯಕ್ರಮದಲ್ಲಿ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ನಡೆಯಿತು. ವಿಶೇಷ ಉಪನ್ಯಾಸ ನೀಡಿದ ಖ್ಯಾತ ಸಂಶೋಧಕ ಡಾ. ಎಂ. ಚಿದಾನಂದಮೂರ್ತಿ ಹಾಗೂ ಕುಲಪತಿ ಡಾ. ಎಸ್.ಸಿ. ಶರ್ಮ, ಕುಲಸಚಿವ ಪ್ರೊ. ಲಕ್ಷ್ಮೀಕಾಂತ ಅವರು ವೇದಿಯಲ್ಲಿದ್ದರು.



ಪೂಜ್ಯ ಶ್ರೀ ಶ್ರೀ ಬಸವಾನಂದ ಸ್ವಾಮಿಗಳವರ ನೇತೃತ್ವದಲ್ಲಿ ಆಯೋಜಿಸಿದ್ದ ನೈಸರ್ಗಿಕ ಕೃಷಿ ಸಮ್ಮೇಳನವನ್ನು ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಶ್ರೀ ಡಿ.ಆರ್ ಪಾಟೀಲ್, ಶ್ರೀ ಸುಭಾಷ್ ಪಾಳೇಕರ್ ಮತ್ತು ಶ್ರೀ ಪ್ರಸನ್ನಮೂರ್ತಿ ಉಪಸ್ಥಿತರಿದ್ದರು.



ಶ್ರೀಮಠದಲ್ಲಿ ಏಪ್ರಿಲ್ 28 ರಂದು ಏರ್ಪಡಿಸಿದ್ದ ಗುರುವಂದನ ಸಮಾರಂಭದಲ್ಲಿ ಪರಮಪೂಜ್ಯ ಶ್ರೀ ಶ್ರೀಗಳವರು ಶ್ರೀಮತಿ ಕೆ.ಆರ್. ಪ್ರೇಮಾಲೀಲಾ ಮಲ್ಲಣ್ಣನವರು ರಚಿಸಿದ "ಶರಣ ಜೀವಾಳ" ಕೃತಿಯನ್ನು ಲೋಕಾರ್ಪಣೆ ಮಾಡಿದರು.

Cover printed at : Geetanjali Graphics, B 71, KSSIDC Indl. Area, 6th Block, Rajajinagar, Bangalore-10. Ph : 23404232